*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *IV-A* | ಬೆಂಗಳೂರು, ಗುರುವಾರ, ಡಿಸೆಂಬರ್ ೩೧, ೨೦೧೫ (ಪುಷ್ಯ ೧೦, ಶಕ ವರ್ಷ ೧೯೩೭) | ನಂ. ೧೭೭೫ |
|---|---|---|
| ***Part– IV-A*** | ***Bengaluru, Thursday, December 31, 2015 (Pushya 10, Shaka Varsha 1937)*** | ***No. 1775*** |


**ಸಂಸದೀಯ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 45 ಶಾಸನ 2015, ಬೆಂಗಳೂರು, ದಿನಾಂಕ: 31.12.2015**

**ಕರ್ನಾಟಕ ಪಂಚಾಯತ್‌ರಾಜ್ (ಎರಡನೇ ತಿದ್ದುಪಡಿ) ವಿಧೇಯಕ, 2015ಕ್ಕೆ** 2015ರ ಡಿಸೆಂಬರ್ ತಿಂಗಳ ಹದಿನಾರನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2015ರ ಕರ್ನಾಟಕ ಅಧಿನಿಯಮ ಸಂಖ್ಯೆ:44 ಎಂಬುದಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2015ರ ಕರ್ನಾಟಕ ಅಧಿನಿಯಮ ಸಂಖ್ಯೆ: 44**

(2015ರ ಡಿಸೆಂಬರ್ ತಿಂಗಳ ಮೂವತ್ತೊಂದನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ಪಂಚಾಯತ್ ರಾಜ್ (ಎರಡನೇ ತಿದ್ದುಪಡಿ) ಅಧಿನಿಯಮ, 2015**

(2015ರ ಡಿಸೆಂಬರ್ ತಿಂಗಳ ಹದಿನಾರನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು (1993ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**–(1) ಈ ಅಧಿನಿಯಮವನ್ನು ಕರ್ನಾಟಕ ಪಂಚಾಯತ್ ರಾಜ್ (ಎರಡನೇ ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಶೀರ್ಷಿಕೆ, ದೀರ್ಘ ಶೀರ್ಷಿಕೆ ಮತ್ತು ಪ್ರಸ್ತಾವನೆಯ ತಿದ್ದುಪಡಿ.**– ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ, 1993ರ (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ),–

(i) ಶೀರ್ಷಿಕೆಯಲ್ಲಿ "ಪಂಚಾಯತ್ ರಾಜ್" ಎಂಬ ಪದಗಳಿಗೆ "ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) ದೀರ್ಘ ಶೀರ್ಷಿಕೆ ಮತ್ತು ಪ್ರಸ್ತಾವನೆಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಈ ಮುಂದಿನವುಗಳಿಗಾಗಿ, ಎಂದರೆ:–

(i) ಭಾರತ ಸಂವಿಧಾನದ 73ನೇ ತಿದ್ದುಪಡಿಯ ಉದ್ದೇಶವನ್ನು ಈಡೇರಿಸುವುದಕ್ಕಾಗಿ ಮತ್ತು ಜನರು ಹೆಚ್ಚಿನ ರೀತಿಯಲ್ಲಿ ಗ್ರಾಮ ಸ್ವರಾಜ್ಯನ, ಸ್ಥಳೀಯ ಸ್ವಯಮಾಡಳಿತದ ಘಟಕಗಳಲ್ಲಿ ಭಾಗವಹಿಸಿ ಕಾರ್ಯನಿರ್ವಹಿಸಲು ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಹಂತಗಳಲ್ಲಿ ಚುನಾಯಿತ ನಿಕಾಯಗಳೊಂದಿಗೆ ಮೂರು ಹಂತದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಸ್ಥಾಪಿಸುವುದಕ್ಕಾಗಿ;

(ii) ಗ್ರಾಮೀಣ ಜನರ ಜೀವನಮಟ್ಟವನ್ನು ಹೆಚ್ಚಿಸಲು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕಾಗಿ;

(iii) ಗ್ರಾಮೀಣ ಕರ್ನಾಟಕವನ್ನು ವ್ಯಾಜ್ಯ ಮುಕ್ತ, ಶೋಷಣೆ ಮುಕ್ತ, ಮತ್ತು ಭಯ ಮುಕ್ತ, ಸಮಾನತಾವಾದಿ ರಾಜ್ಯವನ್ನಾಗಿ ಮಾಡುವುದಕ್ಕಾಗಿ;

(iv) ಗ್ರಾಮಗಳನ್ನು ಬಯಲು ಬಹಿರ್ದೆಸೆ ಮುಕ್ತವಾದ ಸ್ವಚ್ಛ ಗ್ರಾಮಗಳನ್ನಾಗಿ ಮಾಡುವುದಕ್ಕಾಗಿ;

(v) ಮಹಿಳೆಯರನ್ನು ಸಶಕ್ತಗೊಳಿಸುವುದು ಮತ್ತು ಲಿಂಗ ಸಮಾನತೆಯನ್ನು ಸಾಧಿಸುವ ಸಲುವಾಗಿ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಬಲ ಪಡಿಸುವುದಕ್ಕಾಗಿ;

(vi) ಆರ್ಥಿಕ ಅಭ್ಯುದಯ ಮತ್ತು ಸಾಮಾಜಿಕ ಸಮಾನತೆಯನ್ನು ಸಾಧಿಸಲು ಸಾಮಾಜಿಕವಾಗಿ ವಂಚಿತರಾದ ವರ್ಗಗಳಿಗೆ ಮೀಸಲಾತಿಯನ್ನು ಕಲ್ಪಿಸುವುದಕ್ಕೆ;

(vii) ಆರ್ಥಿಕ ಚಟುವಟಿಕೆಗಳ ಮೂಲಕ ಗ್ರಾಮೀಣ ಜನರ ಬದುಕುಗಳಲ್ಲಿ ಪರ್ಯಾಯ ಆದಾಯ ಮೂಲಗಳನ್ನು ಕಲ್ಪಿಸುವುದಕ್ಕೆ ಮತ್ತು ನಾಗರಿಕ ಮೂಲ ಸೌಕರ್ಯಗಳನ್ನು ಒದಗಿಸಿ ಜೀವನಮಟ್ಟವನ್ನು ಹೆಚ್ಚಿಸುವುದಕ್ಕಾಗಿ;

(viii) ಸೃಜನಶೀಲ, ಹೆಮ್ಮೆಯ, ಸ್ವಾವಲಂಬಿ, ಸಂಪದ್ಭರಿತ, ತೃಪ್ತ ಮತ್ತು ಸಾಮರಸ್ಯ ಸಮಾಜವನ್ನು ನಿರ್ಮಾಣ ಮಾಡುವುದಕ್ಕಾಗಿ;

(ix) ಜನವಸತಿ ಸಭೆ, ವಾರ್ಡ್ ಸಭಾ ಮತ್ತು ಗ್ರಾಮ ಸಭೆಗಳನ್ನು ಅಭಿವೃದ್ಧಿಯ ಚಿಂತನ ಮಂಥನ ವೇದಿಕೆಗಳಂತೆ ಬಳಕೆ ಮಾಡಿಕೊಂಡು ನೇರವಾಗಿ ಪಾಲ್ಗೊಳ್ಳುವಂತೆ ಮಾಡಿ ಜನರ ದನಿ, ನೀತಿ ರಚನೆ ಕಾರ್ಯದಲ್ಲಿ, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಭುಗಳೇ ಆಗಿರುವ ಜನರೇ ಆಡಳಿತದಲ್ಲಿ ಪ್ರತಿಧ್ವನಿಸುವಂತೆ ಮಾಡುವುದಕ್ಕೆ, ಅವಕಾಶ ಕಲ್ಪಿಸಿ ಆ ಮೂಲಕ ಮಹಾತ್ಮಾ ಗಾಂಧೀಜಿಯವರ ಕನಸಿನ ಗ್ರಾಮಸ್ವರಾಜ್ಯ ಸ್ಥಾಪನೆಯನ್ನು ಮಾಡುವುದಕ್ಕಾಗಿ,

– ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಘಟಕಗಳನ್ನು ಸ್ಥಾಪಿಸುವುದಕ್ಕಾಗಿ ಉಪಬಂಧ ಕಲ್ಪಿಸಲು ಒಂದು ಅಧಿನಿಯಮ."

**3. ಮೂಲ ಅಧಿನಿಯಮದ ಸಂಕ್ಷಿಪ್ತ ಹೆಸರಿನ ತಿದ್ದುಪಡಿ.–** ಮೂಲ ಅಧಿನಿಯಮದ ಸಂಕ್ಷಿಪ್ತ ಹೆಸರಿನಲ್ಲಿ "ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ" ಎಂಬ ಪದಗಳಿಗೆ "ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 2ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 2ನೇ ಪ್ರಕರಣದಲ್ಲಿ,–

(1) (9)ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(9ಎ) "ಗೊತ್ತುಪಡಿಸಿದ ನ್ಯಾಯಾಲಯ" ಎಂದರೆ, ಗ್ರಾಮ ಪಂಚಾಯತಿಗಳಿಗೆ ಮತ್ತು ತಾಲ್ಲೂಕು ಪಂಚಾಯತಿಗಳಿಗೆ ಸಂಬಂಧಿಸಿದ ಚುನಾವಣಾ ವಿವಾದಗಳನ್ನು ಅಧಿವಿಚಾರಣೆಯನ್ನು ನಡೆಸಲು ಅಧಿಕಾರ ವ್ಯಾಪ್ತಿಯುಳ್ಳ ಗೊತ್ತುಪಡಿಸಿದ, ಹಿರಿಯ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ, ಮತ್ತು ಪಂಚಾಯತ್ ಪ್ರದೇಶವು ಅಥವಾ ಪಂಚಾಯತ್ ಪ್ರದೇಶದ ಬಹಳಷ್ಟು ಭಾಗವು ಯಾವ ಜಿಲ್ಲಾ ಪಂಚಾಯತ್‌ಗಳ ವ್ಯಾಪ್ತಿಗೆ ಬರುವವೋ ಆ ಜಿಲ್ಲಾ ಪಂಚಾಯತಿಗಳು ಅನುಕ್ರಮವಾಗಿ ಯಾವ ಜಿಲ್ಲಾ ನ್ಯಾಯಾಧೀಶರ ಅಧಿಕಾರ ವ್ಯಾಪ್ತಿಗೆ ಒಳಪಡುತ್ತವೋ ಆ ಜಿಲ್ಲಾ ಪಂಚಾಯತ್‌ಗಳಿಗೆ ಸಂಬಂಧಿಸಿದ ಚುನಾವಣಾ ವಿವಾದಗಳ ಅಧಿವಿಚಾರಣೆಗಾಗಿ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ಜಿಲ್ಲಾ ನ್ಯಾಯಾಧೀಶರ ನ್ಯಾಯಾಲಯ".

(2) (11)ನೇ ಖಂಡದಲ್ಲಿ (x)ನೇ ಬಾಬಿನ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(xi) ಪಂಚಾಯತ್ ಪ್ರದೇಶದಲ್ಲಿರುವ ಯಾವುದೇ ಕಟ್ಟಡದ ಮೇಲ್ಛಾವಣಿಯ ಮೇಲೆ ಅಥವಾ ಕಾಂಪೌಂಡ್‌ನ ಒಳಗಿರುವ ಭೂಭಾಗದಲ್ಲಿ (Platform) ಅಥವಾ ಆ ಕಟ್ಟಡಕ್ಕೆ ಹೊಂದಿಕೊಂಡಿರುವ ಯಾವುದೇ ಭೂಮಿಯಲ್ಲಿ ಹೋರ್ಡಿಂಗ್ ಅಥವಾ ಮೊಬೈಲ್ ಟವರನ್ನು ನಿಲ್ಲಿಸುವುದು."

(3) (16)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(16) "ಗ್ರಾಮ ಸಭಾ" ಎಂದರೆ, ಗ್ರಾಮ ಮಟ್ಟದಲ್ಲಿ ಗ್ರಾಮಪಂಚಾಯತ್ ಪ್ರದೇಶದ ಒಳಗೆ ಇರುವ ಗ್ರಾಮಕ್ಕೆ ಸಂಬಂಧಿಸಿದ ಮತದಾರರ ಪಟ್ಟಿಗಳಲ್ಲಿ ನೋಂದಾಯಿತರಾಗಿರುವ ವ್ಯಕ್ತಿಗಳನ್ನು ಒಳಗೊಂಡಿರುವ ಒಂದು ನಿಕಾಯ."

(4) (16)ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(16ಎ) "ಜನವಸತಿ" ಎಂದರೆ, ಗ್ರಾಮದ ಪರಿಮಿತಿಯ ಹೊರಗೆ ಇರುವ ಒಂದು ನೂರರಿಂದ ಮುನ್ನೂರೈವತ್ತು ಜನಸಂಖ್ಯೆಯುಳ್ಳ ಸಣ್ಣ ವಸತಿ ಪ್ರದೇಶ ಅಥವಾ ಯಾವುದೇ ಹೆಸರಿನಿಂದ ಕರೆಯಲಾಗುವ, ಇತರ ಸಣ್ಣ ವಸತಿ ಸಮೂಹ (hamlet) ಅಥವಾ ಅಂಥ ಸಣ್ಣ ವಸತಿ ಪ್ರದೇಶ (small settlement) ಅಥವಾ ಸಣ್ಣ ವಸತಿ ಸಮೂಹಗಳ ಗುಂಪು ಮತ್ತು 3ನೇ ಪ್ರಕರಣದ ಅಡಿಯಲ್ಲಿ ಹಾಗೆ ಅಧಿಸೂಚಿತವಾದುದು;

(16ಬಿ) "ಜನವಸತಿ ಸಭಾ" ಎಂದರೆ, ಗ್ರಾಮ ಪಂಚಾಯತಿಯಲ್ಲಿರುವ ಜನವಸತಿಯ ಮತದಾರರ ಪಟ್ಟಿಯಲ್ಲಿ ನೋಂದಾಯಿಸಿರುವ ವ್ಯಕ್ತಿಗಳನ್ನು ಒಳಗೊಂಡಿರುವ ಒಂದು ನಿಕಾಯ."

(5) (28ಬಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(28ಬಿ) "ಪಂಚಾಯತಿ ಸಿಬ್ಬಂದಿ" ಎಂದರೆ, ಕರ್ನಾಟಕ ಪಂಚಾಯತ್ ರಾಜ್ ಆಡಳಿತ ಸೇವೆಯಲ್ಲಿ ಇರುವ ಹುದ್ದೆಗಳನ್ನು ಹೊರತುಪಡಿಸಿ ಪಂಚಾಯತಿಯು ನೇಮಕ ಮಾಡಿದ ಅಧಿಕಾರಿಗಳು ಮತ್ತು ಸಿಬ್ಬಂದಿ;

(28ಸಿ) "ಜವಾಬ್ದಾರಿಗಳ ನಕ್ಷೆ" ಎಂದರೆ, "ಪಂಚಾಯತ್ ರಾಜ್ ಸಂಸ್ಥೆಗಳು ಈ ಅಧಿನಿಯಮದ ಅಡಿಯಲ್ಲಿ ಹೊಂದಿರಬಹುದಾದ ಜವಾಬ್ದಾರಿಗಳ ವಿವರವಾದ ಪಟ್ಟಿ;"

(28ಡಿ) ಈ ಅಧಿನಿಯಮದಲ್ಲಿ ಬಳಸಿರುವ "ರಿಟರ್ನಿಂಗ್ ಆಫೀಸರ್", "ಅಸಿಸ್ಟೆಂಟ್ ರಿಟರ್ನಿಂಗ್ ಆಫೀಸರ್", "ಪ್ರಿಸೈಡಿಂಗ್ ಆಫೀಸರ್" ಮತ್ತು "ಪೋಲಿಂಗ್ ಆಫೀಸರ್" ಎಂಬ ಪದಗಳಿಗೆ, ರಾಜ್ಯ ಚುನಾವಣಾ ಆಯೋಗವು ಪಂಚಾಯತ್‌ಗಳಿಗೆ

ಚುನಾವಣೆಗಳನ್ನು ನಡೆಸುವುದಕ್ಕೆ ಸಂಬಂಧಿಸಿದಂತೆ ಆ ಎಲ್ಲ ಪದಗಳು ಜನತಾ ಪ್ರಾತಿನಿಧ್ಯ ಅಧಿನಿಯಮ, 1951ರಲ್ಲಿ (1951ರ ಕೇಂದ್ರ ಅಧಿನಿಯಮ 43) ಅವುಗಳಿಗೆ ಕೊಟ್ಟಿರುವ ಅರ್ಥಗಳನ್ನೇ ಹೊಂದಿರತಕ್ಕದ್ದು;"

(6) (42ಎ) ಖಂಡಕ್ಕೆ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(42ಎ) "ದೂರದೃಷ್ಟಿ ಯೋಜನೆ" ಎಂದರೆ, ಪಂಚಾಯತ್ ಪ್ರದೇಶದಲ್ಲಿ ಒಟ್ಟಾರೆ ಅಭಿವೃದ್ಧಿಯನ್ನು ಸಾಧಿಸುವುದಕ್ಕಾಗಿ ಇರುವ ದೀರ್ಘಾವಧಿಯ ದೂರದೃಷ್ಟಿ ಯೋಜನೆ.

(42ಬಿ) "ಸಮಾಜದ ಸುರಕ್ಷಿತವಲ್ಲದ (vulnerable) ವರ್ಗಗಳು" ಎಂದರೆ, ಮಕ್ಕಳು, ಅಪ್ರಾಪ್ತ ವಯಸ್ಸಿನ ಮಕ್ಕಳು, ಮಹಿಳೆಯರು, ಹಿರಿಯ ನಾಗರಿಕರು, ರೋಗಗ್ರಸ್ಥರು ಮತ್ತು ಅಶಕ್ತರು, ಅಸಮರ್ಥರು ಮತ್ತು ವಿಕಲಚೇತನರು, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು, ಸಮಾಜದ ಧಾರ್ಮಿಕ, ಭಾಷಾ ಮತ್ತು ಲೈಂಗಿಕ ಅಲ್ಪಸಂಖ್ಯಾತರು, ಜೀತ ಕಾರ್ಮಿಕರು ಯಾರಾದರೂ ಇದ್ದಲ್ಲಿ, ಅಲೆಮಾರಿಗಳು ಮತ್ತು ಬುಡಕಟ್ಟು ಸಮೂಹಗಳು ಹಾಗೂ ವಲಸೆ ಕಾರ್ಮಿಕರು;

(42ಸಿ) "ವಾರ್ಡ್" ಎಂದರೆ, ಗ್ರಾಮ ಪಂಚಾಯತಿಗೆ ಚುನಾವಣೆಗಳನ್ನು ನಡೆಸುವ ಉದ್ದೇಶಕ್ಕಾಗಿ ಗ್ರಾಮಪಂಚಾಯತಿಯ ಒಳಗೆ ಗಡಿ ಗುರುತು ಮಾಡಲಾಗಿದೆಯೋ ಆ ಸ್ಥಳೀಯ ಚುನಾವಣಾ ಕ್ಷೇತ್ರ;

(42ಡಿ) ವಾರ್ಡ್ ಪ್ರದೇಶಕ್ಕೆ ಸಂಬಂಧಿಸಿದಂತೆ, "ವಾರ್ಡ್‌ಸಭಾ" ಎಂದರೆ, ಪ್ರತಿಯೊಂದು ಗ್ರಾಮ ಪಂಚಾಯತಿಯ ಚುನಾವಣಾ ಕ್ಷೇತ್ರದ ಮತದಾರರ ಪಟ್ಟಿಗಳಲ್ಲಿ ಮತದಾರರಾಗಿ ನೋಂದಾಯಿತರಾದ ಎಲ್ಲಾ ವ್ಯಕ್ತಿಗಳನ್ನು ಒಳಗೊಂಡ ನಿಕಾಯ;"

**5. ಅಧ್ಯಾಯ Iಎ ಸೇರ್ಪಡೆ.–** ಮೂಲ ಅಧಿನಿಯಮದ Iನೇ ಅಧ್ಯಾಯದ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"ಅಧ್ಯಾಯ Iಎ**

**ಪಂಚಾಯತ್ ನೀತಿ ನಿರ್ದೇಶಕ ತತ್ವಗಳು**

**2ಎ. ಪಂಚಾಯತ್ ನೀತಿ ನಿರ್ದೇಶಕ ತತ್ವಗಳು.–** (1) ಪಂಚಾಯತಿಯು ಈ ಮುಂದಿನವುಗಳಿಗೆ ಪ್ರೋತ್ಸಾಹಿಸಲು ಶ್ರಮಿಸತಕ್ಕದ್ದು, ಎಂದರೆ:–

(i) ಎಲ್ಲರಿಗೂ ಶುದ್ಧ ಕುಡಿಯುವ ನೀರು, ಆರೋಗ್ಯ ಮತ್ತು ನೈರ್ಮಲ್ಯ ಸೌಲಭ್ಯಗಳನ್ನು ಒದಗಿಸುವ ಮೂಲಕ ಗ್ರಾಮ ಸಮುದಾಯದ ಜೀವನಮಟ್ಟವನ್ನು ಮತ್ತು ಬದುಕಿನ ಗುಣಮಟ್ಟವನ್ನು ಸುಧಾರಿಸುವುದು;

(ii) ಅಗತ್ಯ ಗ್ರಾಮೀಣ ಮೂಲ ಸೌಲಭ್ಯಗಳನ್ನು ಒದಗಿಸುವುದು ಮತ್ತು ಗ್ರಾಮೀಣ ಸಮುದಾಯಗಳು ಮತ್ತು ಸಂಘಟನೆಗಳನ್ನು ತನ್ನ ಸುಧಾರಣೆ ಮತ್ತು ಅಭಿವೃದ್ಧಿಯಲ್ಲಿ ತೊಡಗಿಸಿಕೊಳ್ಳುವುದು;

(iii) ತನ್ನ ನಿವಾಸಿಗಳ ಆರ್ಥಿಕ, ಸಾಮಾಜಿಕ ಮತ್ತು ಪರಿಸರಾತ್ಮಕ ಗುಣಮಟ್ಟವನ್ನು ವೃದ್ಧಿಸುವುದಕ್ಕಾಗಿ ಆಸ್ತಿಗಳ ನಿರ್ವಹಣೆ ಮತ್ತು ಸುಸ್ಥಿರ ಅಭಿವೃದ್ಧಿಗಾಗಿ ಪಂಚಾಯತಿ ಪ್ರದೇಶದಲ್ಲಿ ಪ್ರಜಾಸತ್ತಾತ್ಮಕ ಪ್ರಾತಿನಿಧ್ಯ, ಸಾಮಾಜಿಕ ಸಮ್ಮಿಳನ ಮತ್ತು ಅರ್ಥಪೂರ್ಣ ಸಮುದಾಯಯವನ್ನು ತೊಡಗಿಸಿಕೊಳ್ಳುವುದು;

(iv) ಪಂಚಾಯತ್ ಅಧೀನದಲ್ಲಿರುವ ಸಂಪನ್ಮೂಲಗಳನ್ನು ಬಳಕೆ ಮಾಡಿಕೊಂಡು ಪಂಚಾಯತಿ ಪ್ರದೇಶದ ಅರಣ್ಯ ಮತ್ತು ವನ್ಯಜೀವಿಗಳನ್ನು ಸುಸ್ಥಿರ ಅಭಿವೃದ್ಧಿಗೆ ಸಮರ್ಪಕವಾಗಿ ಮುಂದಿನ ಪೀಳಿಗೆಗಾಗಿ ಅವುಗಳನ್ನು ಸಂರಕ್ಷಿಸುವ ಸಮರ್ಥನೀಯ ವಿಧಾನವನ್ನು ಅನುಸರಿಸುವುದು;

(v) ಸ್ಥಳೀಯ ಸಮುದಾಯದ ಕಲೆ, ಸಂಸ್ಕೃತಿ ಮತ್ತು ಪರಂಪರೆಗಳನ್ನು ರಕ್ಷಿಸುವುದು ಮತ್ತು ಕಾಪಾಡುವುದು ಹಾಗೂ ಪ್ರವಾಸೋದ್ಯಮಕ್ಕೆ ಉತ್ತೇಜನವನ್ನು ನೀಡುವುದು;

(vi) ನವಣೆ, ಸಜ್ಜೆ, ಬಿಳಿ ಜೋಳ, ಸಾಮೆ, ಸಾವೆ, ಕೋರ್ಲಿ ಇತ್ಯಾದಿ ಮತ್ತು ಔಷಧೀಯ ಮೌಲ್ಯವುಳ್ಳ ಗಿಡಮೂಲಿಕೆಗಳಂಥ ದೇಸಿ ವೈವಿಧ್ಯತೆಯುಳ್ಳ ಬೀಜಗಳನ್ನು ಸಂರಕ್ಷಿಸುವುದು, ಅಭಿವೃದ್ಧಿಪಡಿಸುವುದು ಮತ್ತು ಹಂಚಿಕೆ ಮಾಡುವುದು;

(vii) ಕೃಷಿ–ಕೈಗಾರಿಕಾ ಕೇಂದ್ರಗಳು, ಗ್ರಾಮೀಣ ಗುಡಿ ಕೈಗಾರಿಕೆಗಳನ್ನು ಉತ್ತೇಜಿಸುವ ಮೂಲಕ ಉದ್ಯೋಗಗಳನ್ನು ಸೃಜಿಸುವುದು ಮತ್ತು ವ್ಯವಹಾರ ಕಾರ್ಯಾಚರಣೆಗಳನ್ನು ಸುಗಮಗೊಳಿಸುವುದಕ್ಕಾಗಿ ದಸ್ತಾವೇಜುಗಳನ್ನು ಸ್ವೀಕರಿಸುವ ಏಕ ಗವಾಕ್ಷಿ ವ್ಯವಸ್ಥೆ ಮಾಡುವುದು;

(viii) ರಾಷ್ಟ್ರೀಯ ಮತ್ತು ರಾಜ್ಯ ಕಾರ್ಯನೀತಿಗಳಿಗೆ ಅನುಸಾರವಾಗಿ ಕಾರ್ಯನಿರ್ವಹಿಸಲು ಸಮರ್ಥಗೊಳಿಸುವುದಕ್ಕಾಗಿ ಬೇರುಮಟ್ಟದಲ್ಲಿ ಸಹಕಾರಿ ಸಂಸ್ಥೆಗಳನ್ನು ಪ್ರೋತ್ಸಾಹಿಸುವ ಮೂಲಕ ಸಹಕಾರಿ ಮನೋಭಾವ ಮತ್ತು ವಾತಾವರಣವನ್ನು ನಿರ್ಮಿಸುವುದು;

(ix) ಗ್ರಾಮೀಣ ಪ್ರದೇಶಗಳಲ್ಲಿ ಜನರ ಕೌಶಲ್ಯ, ಜ್ಞಾನ ಮತ್ತು ಇತರ ಸಾಮರ್ಥ್ಯಗಳಿಗೆ ಅನುಗುಣವಾಗಿ ಗ್ರಾಮೀಣ ಮಾನವ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸುವುದು ಮತ್ತು ಸಬಲೀಕರಣಗೊಳಿಸುವುದು;

(x) ಶಾಂತಿಯುತ ಸಮಾಜ ಮತ್ತು ಕೋಮು ಸೌಹಾರ್ದವನ್ನು ಸಂರಕ್ಷಿಸುವ ಹಾಗೂ ಎಲ್ಲಾ ರೀತಿಯ ಹಿಂಸೆಗಳನ್ನು ತಡೆಗಟ್ಟುವ ಸುರಕ್ಷಿತ ಮತ್ತು ಸಹನಶೀಲ ಸಮುದಾಯವನ್ನು ಪೋಷಿಸುವುದು.

(2) ಗ್ರಾಮದ ನಿವಾಸಿಗಳ ಸಾಮಾಜಿಕ ವ್ಯವಸ್ಥೆಯಲ್ಲಿ ಯಾವುದಾದರೂ ಒಂದು ನಿರಾಶಾದಾಯಕ ಪ್ರವೃತ್ತಿ ಅಥವಾ ಆಲೋಚನೆ ಹಬ್ಬಿದಾಗ ಅದು ನೆಲೆಗೊಳ್ಳುವುದನ್ನು ತಡೆಯುವುದು ಗ್ರಾಮ ಪಂಚಾಯತಿಯ ನಿರ್ದೇಶನ ತತ್ವಗಳ ಪ್ರಮುಖ ತತ್ವವಾಗಿರುತ್ತದೆ. ಹಣಕಾಸಿನ ಋಣಭಾರ, ಬಡತನ ಅಥವಾ ಇತರ ಕಾರಣಗಳಿಗಾಗಿ ಆತ್ಮಹತ್ಯೆಯಂತಹ ಕಠಿಣ ನಿರ್ಧಾರಗಳನ್ನು ಕೈಗೊಳ್ಳುವ ಮಾನಸಿಕ ಸ್ಥಿತಿಯಿಂದ ಪೀಡಿತರಾದ ರೈತರು ಮತ್ತು ಇತರರು ಸಾಮಾಜಿಕ–ಆರ್ಥಿಕ ಸ್ಥಿತಿಗತಿಗಳ ಒತ್ತಡಕ್ಕೆ ಸಿಲುಕಿ

ನಾಜೂಕಾದ ಪರಿಸ್ಥಿತಿಯನ್ನು ಎದುರಿಸುತ್ತಿರುವ ಸಂದರ್ಭಗಳಲ್ಲಿ ಅವರೆಡೆಗೆ ಗ್ರಾಮ ಪಂಚಾಯತಿಯು ವಿಶೇಷ ಗಮನಹರಿಸತಕ್ಕದ್ದು ಮತ್ತು ಗ್ರಾಮ ಪಂಚಾಯತಿಯ ಸದಸ್ಯರು ಅಂತಹ ವ್ಯರ್ಥ ಸಾಹಸಗಳ ಮನಸ್ಥಿತಿಯಿಂದ ಉಂಟಾಗುವ ಪರಿಣಾಮಗಳ ಬಗ್ಗೆ ನಿವಾಸಿಗಳನ್ನು ಜಾಗೃತಗೊಳಿಸಿ ಅವರಲ್ಲಿ ವಿಶ್ವಾಸ ಕುದುರಿಸುವ ಕ್ರಮ ಕೈಗೊಳ್ಳುವುದು."

**6. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"3. ಗ್ರಾಮ ಸ್ವರಾಜ್ ಘಟಕಗಳು.–**(1) ಜನವಸತಿ ಸಭಾ, ವಾರ್ಡ್ ಸಭಾ ಮತ್ತು ಗ್ರಾಮ ಸಭಾಗಳು ಗ್ರಾಮ ಪಂಚಾಯತಿಯ ಘಟಕಗಳಾಗಿರತಕ್ಕದ್ದು.

(2) ಜಿಲ್ಲೆಯ ಜಿಲ್ಲಾಧಿಕಾರಿಯು ಜನವಸತಿಯ ಪ್ರದೇಶಗಳೆಂದು ನಿರ್ದಿಷ್ಟಪಡಿಸಿ ಅಧಿಸೂಚಿಸುವ ಅಂಥ ಜನವಸತಿಗಳಷ್ಟು ಸಂಖ್ಯೆಯ ಜನವಸತಿ ಸಭಾಗಳು ಇರತಕ್ಕದ್ದು.

(3) ಗ್ರಾಮ ಪಂಚಾಯತಿ ಪ್ರದೇಶದ ಪರಿಮಿತಿಯೊಳಗೆ, ಎಷ್ಟು ವಾರ್ಡ್‌ಗಳು ಇವೆಯೋ ಅಷ್ಟು ವಾರ್ಡ್ ಸಭಾಗಳು ಇರತಕ್ಕದ್ದು; ಮತ್ತು

(4) ಗ್ರಾಮ ಪಂಚಾಯತಿ ಪ್ರದೇಶದೊಳಗೆ ಇರುವ ಸಂಬಂಧಪಟ್ಟ ಗ್ರಾಮದ ಮತದಾರರ ಪಟ್ಟಿಯಲ್ಲಿ ಮತದಾರರೆಂದು ನೋಂದಾಯಿಸಿರುವ ಎಲ್ಲ ವ್ಯಕ್ತಿಗಳನ್ನು ಒಳಗೊಂಡ ಪ್ರತಿಯೊಂದು ಗ್ರಾಮ ಪಂಚಾಯತಿಯ ಒಂದು ಗ್ರಾಮ ಸಭೆ ಇರತಕ್ಕದ್ದು."

**7. 3ಎ ಪ್ರಕರಣದ ತಿದ್ದುಪಡಿ.–**ಮೂಲ ಅಧಿನಿಯಮದ 3ಎ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"3ಎ. ಜನವಸತಿ ಸಭೆಯ ಪ್ರಕಾರ್ಯಗಳು ಮತ್ತು ಅಧಿಕಾರಗಳು.–** (1) ತನ್ನ ಅಧಿಕಾರ ವ್ಯಾಪ್ತಿಯೊಳಗೆ ಜನವಸತಿ ಸಭಾದ ಪ್ರಕಾರ್ಯಗಳು ವಾರ್ಡ್ ಸಭಾ ಮತ್ತು ಗ್ರಾಮ ಸಭಾಗೆ ನೆರವು ನೀಡುವುದು ಆಗಿರತಕ್ಕದ್ದು ಮತ್ತು ಈ ಮುಂದಿನ ಇತರ ಪ್ರಕಾರ್ಯಗಳನ್ನೂ ಒಳಗೊಳ್ಳತಕ್ಕದ್ದು, ಎಂದರೆ:–

(i) ಸಾಮಾಜಿಕ ನ್ಯಾಯವನ್ನು ಎತ್ತಿಹಿಡಿಯುವಂಥ ಮತ್ತು ಸಾಮಾನ್ಯವಾಗಿ ಎಲ್ಲಾ ಜನರು ಮತ್ತು ಅದರಲ್ಲೂ ಮುಖ್ಯವಾಗಿ ಸಮಾಜದ ಸುರಕ್ಷಿತವಲ್ಲದ ವರ್ಗಗಳ ಜನರು ತಮ್ಮ ತಮ್ಮ ಹಕ್ಕುಗಳನ್ನು ಚಲಾಯಿಸುವುದಕ್ಕೆ ಸುರಕ್ಷಿತ ಮತ್ತು ಹಿತಕರ ಪರಿಸರ ಇರುವುದನ್ನು ಸುನಿಶ್ಚಿತಪಡಿಸಿಕೊಳ್ಳುವುದು;

(ii) ಅಪಾಯಕಾರಕಗಳನ್ನು ಗುರುತಿಸುವುದು ಮತ್ತು ಗ್ರಾಮದ ನಿವಾಸಿಗಳಿಗೆ ಅದರಲ್ಲೂ ಮುಖ್ಯವಾಗಿ ಜನವಸತಿ ಪ್ರದೇಶಗಳ ನಿವಾಸಿಗಳಿಗೆ ಅಲ್ಲಿ ಸ್ವಚ್ಛ ಮತ್ತು ಆರೋಗ್ಯಕರ ಪರಿಸರವನ್ನು ಕಲ್ಪಿಸಿ ಅಲ್ಲಿನ ಎಲ್ಲ ನಿವಾಸಿಗಳ ಸುರಕ್ಷತೆ, ಭದ್ರತೆಗಾಗಿ ಮತ್ತು ಸ್ವಾತಂತ್ರಕ್ಕಾಗಿ ಕೈಗೊಳ್ಳಬೇಕಾದ ಕ್ರಮಗಳಿಗೆ ಸಲಹೆಯನ್ನು ನೀಡುವುದು;

(iii) ದೂರದೃಷ್ಟಿ ಯೋಜನೆಯನ್ನು ರೂಪಿಸುವುದು ಮತ್ತು ಸಿದ್ಧಪಡಿಸುವುದು ಗ್ರಾಮ ಪಂಚಾಯತ್‌ಗೆ ಸಾಧ್ಯವಾಗುವಂತೆ ಮಾಡುವ ಸಲುವಾಗಿ ಸಾಮಾಜೋ–ಆರ್ಥಿಕ ಅಂಕಿ ಅಂಶಗಳನ್ನು ಸಂಗ್ರಹಿಸುವುದಕ್ಕೆ ಜನವಸತಿ ಪ್ರದೇಶದ ಅಭಿವೃದ್ಧಿಗಾಗಿ ಅಲ್ಲಿನ ನಿವಾಸಿಗಳ ಅಗತ್ಯತೆಗಳನ್ನು ಮತ್ತು ಅವಶ್ಯಕತೆಗಳನ್ನು ನಿರ್ಧರಿಸುವುದಕ್ಕೆ, ಕ್ರಮಗಳನ್ನು ಸಮೀಕ್ಷೆ ಮಾಡುವುದಕ್ಕೆ ಅಥವಾ ಗ್ರಾಮೀಣ ಪರಾಮರ್ಶನದಲ್ಲಿ ಭಾಗವಹಿಸುವುದಕ್ಕೆ ಗ್ರಾಮ ಪಂಚಾಯತ್‌ಗೆ ನೆರವಾಗುವುದು;

(iv) ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಪರಿಸರ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಮತ್ತು ಜನವಸತಿ ಪ್ರದೇಶದಲ್ಲಿರುವ ಪ್ರತಿಯೊಂದು ಸಮೂಹದ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟುಕೊಂಡು ಜನವಸತಿ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಬೇಕಾದ ಯೋಜನೆಗಳಿಗೆ ಆದ್ಯತೆಯನ್ನು ನಿಗದಿಪಡಿಸುವುದಕ್ಕೆ ಮತ್ತು ಅವುಗಳನ್ನು ದೂರದೃಷ್ಟಿ ಯೋಜನೆಯಲ್ಲಿ ಮತ್ತು ಗ್ರಾಮ ಪಂಚಾಯತ್‌ನ ವಾರ್ಷಿಕ ಅಭಿವೃದ್ಧಿ ಯೋಜನೆಯಲ್ಲಿ ಸೇರಿಸುವುದಕ್ಕಾಗಿ ಅವುಗಳನ್ನು ಗ್ರಾಮ ಸಭೆಯ ಮುಂದೆ ಮಂಡಿಸುವುದು;

(v) ಜನವಸತಿ ಪ್ರದೇಶದಲ್ಲಿ ಬೀದಿ ದೀಪಗಳನ್ನು ಅಳವಡಿಸುವುದು, ಸಮುದಾಯ ನೀರು ಕೊಳಾಯಿಗಳಿಗೆ, ಸಾರ್ವಜನಿಕ ಬಾವಿಗಳಿಗೆ, ಸಾರ್ವಜನಿಕ ನೈರ್ಮಲ್ಯ ಘಟಕಗಳಿಗೆ, ನೀರಾವರಿ ಸೌಲಭ್ಯಗಳಿಗೆ ಮತ್ತು ಅಂತಹ ಇತರ ಸಾರ್ವಜನಿಕ ಸೌಲಭ್ಯ ಯೋಜನೆಗಳಿಗೆ ಶಿಫಾರಸ್ಸು ಮಾಡುವುದಕ್ಕೆ ಮತ್ತು ಕೊರತೆಗಳನ್ನು ಗುರುತಿಸುವುದಕ್ಕೆ ಹಾಗೂ ಪರಿಹಾರ ಕ್ರಮಗಳನ್ನು ಸಲಹೆ ಮಾಡುವುದಕ್ಕೆ ಮತ್ತು ಕಾಮಗಾರಿಗಳು ತೃಪ್ತಿಕರವಾಗಿ ಪೂರ್ಣಗೊಂಡಿರುವುದನ್ನು ವರದಿ ಮಾಡುವುದಕ್ಕೆ ಹಾಗೂ ಸ್ವಚ್ಛ ಮತ್ತು ಆರೋಗ್ಯಕರ ವಾತಾವರಣವನ್ನು ನಿರ್ವಹಿಸುವುದು;

(vi) ಜನವಸತಿ ಪ್ರದೇಶದಲ್ಲಿ ನೀರು ಪೂರೈಕೆ ವ್ಯವಸ್ಥೆಯಲ್ಲಿ ಮತ್ತು ಬೀದಿ ದೀಪ ವ್ಯವಸ್ಥೆಯಲ್ಲಿ ಇರುವ ಕುಂದು ಕೊರತೆಗಳನ್ನು ಗುರುತಿಸುವುದು ಮತ್ತು ಪರಿಹಾರ ಕ್ರಮಗಳನ್ನು ಸಲಹೆ ಮಾಡುವುದು;

(vii) ಬಡತನ ನಿವಾರಣೆ ಮತ್ತು ಇತರ ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳ ಮೇರೆಗೆ ಜನವಸತಿ ಪ್ರದೇಶದಲ್ಲಿ ನಿಗದಿಪಡಿಸುವ ಮಾನದಂಡಗಳ ಆಧಾರದ ಮೇಲೆ ಅರ್ಹ ಫಲಾನುಭವಿಗಳನ್ನು ಗುರುತಿಸುವುದು ಮತ್ತು ಆಯ್ಕೆ ಮಾಡುವುದು ಹಾಗೂ ಆದ್ಯತೆಯ ಆಧಾರದ ಮೇಲೆ ಅರ್ಹ ಫಲಾನುಭವಿಗಳ ಪಟ್ಟಿಯನ್ನು ಸಿದ್ಧಪಡಿಸುವುದು;

(viii) ಕೈಗೊಂಡ ಯೋಜನೆಗಳನ್ನು, ಕಾರ್ಯಕ್ರಮಗಳನ್ನು ಮತ್ತು ಪ್ರಾಜೆಕ್ಟ್‌ಗಳನ್ನು ರೂಪಿಸಲು ಮೇಲ್ವಿಚಾರಣೆ ಮಾಡಲು ಮತ್ತು ಅನುಷ್ಠಾನಗೊಳಿಸಲು ಗ್ರಾಮ ಸಭೆಗೆ ಮತ್ತು ಗ್ರಾಮ ಪಂಚಾಯತ್‌ಗೆ ನೆರವಾಗುವುದು;

(ix) ಜಾತಿ, ಧರ್ಮ ಮತ್ತು ಲಿಂಗ ಇತ್ಯಾದಿ ಆಧಾರದ ಮೇಲೆ ತಾರತಮ್ಯ ಆಗುವುದನ್ನು ತಡೆಯಲು ಕ್ರಮ ಕೈಗೊಳ್ಳುವುದು;

(x) ಜನವಸತಿ ಪ್ರದೇಶದಲ್ಲಿ ಇರುವ ವಿವಿಧ ಜನ ಸಮೂಹಗಳಲ್ಲಿ ಸಾಮರಸ್ಯ ಮತ್ತು ಏಕತೆಯನ್ನು ತರುವ ಸಲುವಾಗಿ ಅಸ್ಪೃಶ್ಯತೆಯನ್ನು ಮತ್ತು ಯಾವುದೇ ಬಗೆಯ ಸಾಮಾಜಿಕ ಬಹಿಷ್ಕಾರವನ್ನು ನಿರ್ಮೂಲನ ಮಾಡುವ ಮತ್ತು ಸಾಮಾಜಿಕವಾಗಿ ಹೊರಗಿಡುವ ಇತರ ರೀತಿ ರಿವಾಜುಗಳನ್ನು ನಿರ್ಮೂಲನ ಮಾಡಲು ಗ್ರಾಮ ಪಂಚಾಯತ್ ಮಾಡುವ ಪ್ರಯತ್ನಗಳಿಗೆ ನೆರವಾಗುವುದು;

(xi) ಆ ಪ್ರದೇಶದ ಸ್ಥಳೀಯ ಆಟಗಳಿಗೆ, ಕ್ರೀಡಾಸ್ಪರ್ಧೆಗಳಿಗೆ ಸಾಹಿತ್ಯಕ್ಕೆ ಕಲೆಗೆ ಮತ್ತು ಸಂಸ್ಕೃತಿಗೆ ಉತ್ತೇಜನ ನೀಡುವುದಕ್ಕಾಗಿ ಮತ್ತು ಅವುಗಳನ್ನು ಪೋಷಿಸುವುದಕ್ಕಾಗಿ ಮತ್ತು ನಿವಾಸಿಗಳು ತಮ್ಮ ಪ್ರತಿಭೆಯನ್ನು ಪ್ರದರ್ಶಿಸುವುದಕ್ಕಾಗಿ ಅವಕಾಶಗಳನ್ನು ಕಲ್ಪಿಸಿಕೊಡಲು ಸಾಂಸ್ಕೃತಿಕ ಉತ್ಸವಗಳನ್ನು, ಸಾಹಿತ್ಯಿಕ ಚಟುವಟಿಕೆಗಳನ್ನು ಮತ್ತು ಕ್ರೀಡಾ ಉತ್ಸವಗಳನ್ನು ನಡೆಸುವುದು;

(xii) ಸ್ವಚ್ಛತೆ, ಪರಿಸರ ಸಂರಕ್ಷಣೆ, ಸಾರ್ವಜನಿಕ ಉಪದ್ರವ, ಮಾಲಿನ್ಯದಂತಹ ಸಾರ್ವಜನಿಕ ಕಳಕಳಿ ವಿಷಯಗಳ ಬಗ್ಗೆ ಅರಿವು ಮೂಡಿಸುವುದು, ಸಾರ್ವಜನಿಕ ಶಾಂತಿ ಇರುವುದನ್ನು ಎಲ್ಲಾ ಜನರು ಸುರಕ್ಷತೆಯಿಂದಿರುವುದನ್ನು ಮತ್ತು ಅವರಿಗೆ ಭದ್ರತೆ ಒದಗಿಸಿರುವುದನ್ನು ಸುನಿಶ್ಚಿತಪಡಿಸಿಕೊಳ್ಳುವುದು;

(xiii) ಜಲ ಸಂರಕ್ಷಣೆ, ನೈಸರ್ಗಿಕ ಸಸ್ಯ ಸಂಕುಲದ ಸಂರಕ್ಷಣೆ ಮತ್ತು ಜೈವಿಕ ವಿಘಟಿಸಬಹುದಾದ ವಸ್ತುಗಳ ಮರುಬಳಕೆ ವಿಷಯಗಳನ್ನು ಪರಾಮರ್ಶಿಸುವುದು;

(xiv) ವಯಸ್ಕರ ಶಿಕ್ಷಣ ಕಾರ್ಯಕ್ರಮಗಳಿಗೆ ಉತ್ತೇಜನ ನೀಡುವುದು, ಸಾಕ್ಷರತೆ ಮತ್ತು ಶಿಕ್ಷಣ ಮಟ್ಟಗಳನ್ನು ಹೆಚ್ಚಿಸುವುದಕ್ಕೆ ಮತ್ತು ಕೌಟುಂಬಿಕ ಸಮಾಲೋಚನೆಗೆ, ಸದ್ಗುಣ ಬೆಳೆಸಿಕೊಳ್ಳುವುದಕ್ಕೆ ಕುಡಿತದ ಚಟಕ್ಕೆ ಒಳಗಾಗದಂತೆ, ಮಾದಕ ದ್ರವ್ಯಗಳ ಸೇವನೆಯನ್ನು ತ್ಯಜಿಸುವಂತೆ ಪ್ರೇರೇಪಿಸುವುದಕ್ಕೆ ಮತ್ತು ಯುವ ಜನರು ಮತ್ತು ಹಿರಿಯ ನಾಗರಿಕರು ಧೂಮ್ರಪಾನವನ್ನು ತ್ಯಜಿಸುವುದಕ್ಕೆ ಪ್ರೇರೇಪಿಸುವ ಮೂಲಕ ಚಾರಿತ್ರ್ಯ ನಿರ್ಮಾಣ ಕೈಗೊಳ್ಳುವುದು.

(xv) ಮಹಿಳಾ, ಯುವ ಮತ್ತು ಹಿರಿಯ ನಾಗರೀಕರ ಸ್ವಯಂ ಸೇವಾ ಸಂಘ ಸಂಸ್ಥೆಗಳೊಂದಿಗೆ ಸಮಾಲೋಚಿಸಿ ಗ್ರಾಮಕೈಗಾರಿಕೆಗಳಿಗೆ ಸಣ್ಣ ಪ್ರಮಾಣದ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳಿಗೆ ವಾಣಿಜ್ಯ ಉದ್ಯಮಗಳಿಗೆ ಉತ್ತೇಜನ ನೀಡುವುದು ಮತ್ತು ಉದ್ಯೋಗಕ್ಕಾಗಿ ತರಬೇತಿ ಮತ್ತು ಕೌಶಲ್ಯ ಬೆಳವಣಿಗೆಗೆ ಅವಕಾಶಗಳನ್ನು ಒದಗಿಸುವುದು ಮತ್ತು ಅವಶ್ಯಕ ಕ್ರಮಗಳನ್ನು ತೆಗೆದುಕೊಳ್ಳಲು ಗ್ರಾಮ ಸಭೆಗಳಿಗೆ ಪ್ರಸ್ತಾವಗಳನ್ನು ಕಳುಹಿಸುವುದು;

(xvi) ಜನವಸತಿ ಪ್ರದೇಶದಲ್ಲಿರುವ ಸಾರ್ವಜನಿಕ ಆರೋಗ್ಯ ಕೇಂದ್ರಗಳ ಮೇಲ್ವಿಚಾರಣೆ ಮಾಡುವುದು ಹಾಗೂ ಆರೋಗ್ಯ ಕಾರ್ಯಕ್ರಮಗಳ ಅನುಷ್ಠಾನದಲ್ಲಿ, ಅದರಲ್ಲೂ ಮುಖ್ಯವಾಗಿ ಸಾಂಕ್ರಾಮಿಕ ರೋಗಗಳ ನಿವಾರಣೆಗಾಗಿ ಮತ್ತು ಕುಟುಂಬ ಕಲ್ಯಾಣ ಕ್ರಮಗಳ ಬಗ್ಗೆ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಗ್ರಾಮ ಪಂಚಾಯತಿಗೆ ನೆರವಾಗುವುದಕ್ಕೆ ಮತ್ತು ಸಾಂಕ್ರಾಮಿಕ ರೋಗಗಳು ಹರಡಿರುವ ಬಗ್ಗೆ ಮತ್ತು ಪ್ರಕೃತಿ ವಿಕೋಪಗಳು ಸಂಭವಿಸಿರುವುದರ ಬಗ್ಗೆ ಗ್ರಾಮ ಪಂಚಾಯತ್‌ಗೆ, ಚುನಾಯಿತ ಸದಸ್ಯರಿಗೆ ಮತ್ತು ಸಂಬಂಧಪಟ್ಟ ಪಂಚಾಯತ್‌ನ ಕಾರ್ಯಕರ್ತರಿಗೆ ವರದಿ ಮಾಡುವುದು;

(xvii) ಜನವಸತಿ ಪ್ರದೇಶದಲ್ಲಿ ಮತ್ತು ಗ್ರಾಮಪಂಚಾಯತ್ ಪ್ರದೇಶದಲ್ಲಿರುವ ಗೋಮಾಳ, ಹುಲ್ಲುಗಾವಲು, ಕೆರೆಗಳು, ಕೆರೆಅಂಗಳಗಳು, ಅಂತರ್ಜಲ ಸಂಪನ್ಮೂಲಗಳು, ರಸ್ತೆಗಳು, ಸೇತುವೆಗಳು, ಗಣಿಗಳು ಇವೇ ಮುಂತಾದ ಸಾರ್ವಜನಿಕ ಆಸ್ತಿ–ಪಾಸ್ತಿಗಳನ್ನು ಸಂರಕ್ಷಿಸುವ ಮತ್ತು ನಿರ್ವಹಿಸುವ ದೃಷ್ಟಿಯಿಂದ ಅವುಗಳ ಬಗ್ಗೆ ಜಾಗರೂಕತೆ ವಹಿಸುವುದು;

(xviii) ಜಾನಪದ ಕಲೆಗಳನ್ನು, ಕರ ಕುಶಲಕಲೆಗಳನ್ನು, ಗೃಹ ಮತ್ತು ಗುಡಿ ಕೈಗಾರಿಕೆಗಳನ್ನು ಪುನರುಜ್ಜೀವನಗೊಳಿಸುವುದು ಮತ್ತು ಅಭಿವೃದ್ಧಿಪಡಿಸುವುದು;

(xix) ಅಭಿವೃದ್ಧಿ ಕಾಮಗಾರಿಗಳಿಗೆ ನಗದು ಅಥವಾ ವಸ್ತುರೂಪದ ಕೊಡುಗೆಗಳನ್ನು ಮತ್ತು ಶ್ರಮದಾನದ ಕಾರ್ಮಿಕರನ್ನು ಕ್ರೋಢೀಕರಿಸಿ ಒದಗಿಸುವ ಮೂಲಕ ಅಂತಹ ಅಭಿವೃದ್ಧಿ ಕಾಮಗಾರಿಗಳನ್ನು ಸ್ವಯಂ ಸೇವಕರ ಮುಖಾಂತರ ಶ್ರಮದಾನದ ಮೂಲಕ ಪೂರ್ಣಗೊಳಿಸುವುದನ್ನು ಮೇಲ್ವಿಚಾರಣೆ ನಡೆಸುವುದು;

(xx) ಜನವಸತಿ ಪ್ರದೇಶದಲ್ಲಿ ನೈರ್ಮಲ್ಯ ವ್ಯವಸ್ಥೆಗಳನ್ನು ಒದಗಿಸುವುದಕ್ಕಾಗಿ ಸ್ವಚ್ಛ ಮತ್ತು ಬಯಲು ಬಹಿರ್ದೆಸೆ ಮುಕ್ತ ಗ್ರಾಮವನ್ನಾಗಿ ಪರಿವರ್ತಿಸುವುದಕ್ಕೆ ಗ್ರಾಮ ಪಂಚಾಯತ್ ಕಾರ್ಯಕರ್ತರಿಗೆ ನೆರವಾಗುವುದಕ್ಕೆ ಹಾಗೂ ತ್ಯಾಜ್ಯವನ್ನು ತೆಗೆದುಹಾಕುವುದಕ್ಕಾಗಿ ಸ್ವಯಂ ಸೇವೆಯನ್ನು ಒದಗಿಸುವುದು; ಮತ್ತು

(xxi) ಗ್ರಾಮಪಂಚಾಯತಿಗೆ ಸಂದಾಯವಾಗಬೇಕಾದ ತೆರಿಗೆಗಳನ್ನು ಮತ್ತು ಮರುಪಾವತಿ ಮಾಡಬೇಕಾದ ಸಾಲಗಳನ್ನು ಪಾವತಿಸುವಂತೆ ಜನವಸತಿಯ ನಿವಾಸಿಗಳನ್ನು ಪ್ರೇರೇಪಿಸುವುದು.

(2) ಪ್ರತಿಯೊಂದು ಜನವಸತಿ ಸಭಾವು,–

(i) ಗ್ರಾಮಪಂಚಾಯತಿಯ ಕಾರ್ಯಕರ್ತರುಗಳಿಂದ ಅವರುಗಳು ನೀಡತಕ್ಕ ಸೇವೆಗಳು, ಅವರುಗಳ ಮೂಲಕ ಅನುಷ್ಠಾನಗೊಳ್ಳತಕ್ಕ ಕಾರ್ಯಕ್ರಮಗಳು ಮತ್ತು ಯೋಜನೆಗಳು ಹಾಗೂ ಜನವಸತಿ ಸಭಾದ ಯಶಸ್ವಿ ಸಭೆಯ ತರುವಾಯ ಆರು ತಿಂಗಳ ಅವಧಿಯಲ್ಲಿ ಕೈಗೊಳ್ಳಲು ಉದ್ದೇಶಿಸಿದ ಸಾರ್ವಜನಿಕ ಕೆಲಸಗಳ ಮಾಹಿತಿಯನ್ನು ಪಡೆಯುವ;

(ii) ಜನವಸತಿಗೆ ಸಂಬಂಧಿಸಿದಂತೆ ಗ್ರಾಮಸಭಾದ ನಿರ್ಣಯಗಳ ಮೇಲೆ ಕೈಗೊಂಡ ಅನುಸರಣಾ ಕ್ರಮಗಳ ಮೇರೆಗೆ ಗ್ರಾಮ ಪಂಚಾಯತ್ ಮೂಲಕ ಮಾಹಿತಿಯನ್ನು ಪಡೆಯುವ;

(iii) ಜನವಸತಿಯ ನಿವಾಸಿಗಳ ಸಾರ್ವಜನಿಕ ಹಿತ ಅಥವಾ ಆರೋಗ್ಯ ಮತ್ತು ಸುರಕ್ಷೆಗೆ ಹಾನಿಯಾಗುವ ಯಾವುದೇ ಇತರ ಚಟುವಟಿಕೆಯನ್ನು ನಿಯಂತ್ರಿಸುವುದಕ್ಕೆ ಗ್ರಾಮಪಂಚಾಯತಿಗೆ ನೆರವು ನೀಡುವ;

–ಅಧಿಕಾರವನ್ನು ಹೊಂದಿರತಕ್ಕದ್ದು.

**3ಬಿ. ಜನವಸತಿ ಸಭಾದ ಸಭೆಗಳು.–** (1) ಜನವಸತಿ ಸಭಾವು ವಾರ್ಡ್‌ನ ಚುನಾಯಿತ ಸದಸ್ಯರು ನಿರ್ಧರಿಸಬಹುದಾದಂಥ ಸ್ಥಳದಲ್ಲಿ ತನ್ನ ಕಾರ್ಯಕಲಾಪಗಳನ್ನು ನಡೆಸುವುದಕ್ಕಾಗಿ ಕೊನೆಯ ಪಕ್ಷ ಆರು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು. ಇಂಥ ಸಭೆಯು, ಗ್ರಾಮ ಸಭಾದ ಸಭೆಯು ಸಭೆ ಸೇರುವ ತಿಂಗಳಿನ ಕನಿಷ್ಠ ಒಂದು ತಿಂಗಳು ಮೊದಲು ಸಭೆ ಸೇರತಕ್ಕದ್ದು.

(2) ಆಯಾ ಜನವಸತಿ ಪ್ರದೇಶವನ್ನು ಪ್ರತಿನಿಧಿಸುವ ವಾರ್ಡಿನ ಚುನಾಯಿತನಾದ ಸದಸ್ಯನು ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು ಮತ್ತು ಆತನ/ಆಕೆಯ ಅನುಪಸ್ಥಿತಿಯಲ್ಲಿ ಸದರಿ ಜನವಸತಿಸಭಾದಿಂದ ಚುನಾಯಿತನಾದ ಗ್ರಾಮ ಪಂಚಾಯತಿಯ ಯಾವೊಬ್ಬ ಇತರೆ ಮತದಾರನು ಅಧ್ಯಕ್ಷತೆ ವಹಿಸತಕ್ಕದ್ದು. ವಾರ್ಡನ್ನು ಪ್ರತಿನಿಧಿಸುವ ಚುನಾಯಿತ ಸದಸ್ಯರ ಸಂಖ್ಯೆಯು ಒಂದಕ್ಕಿಂತ ಹೆಚ್ಚಾಗಿರುವ ಸಂದರ್ಭದಲ್ಲಿ, ಗ್ರಾಮ ಪಂಚಾಯತಿಯಲ್ಲಿ ತಮ್ಮ ಪೈಕಿಯೇ ಚುನಾಯಿತನಾದ ಸದಸ್ಯನೊಬ್ಬನು ಸಭೆಯನ್ನು ಕರೆದು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ವಾರ್ಡ್‌ಗೆ ಚುನಾಯಿತನಾದ, ಜನವಸತಿ ಪ್ರದೇಶದಲ್ಲಿರುವ ಸದಸ್ಯನು ಜನವಸತಿ ಪ್ರದೇಶ ಸಭಾದ ಸಭೆಯನ್ನು ಯಾವಾಗ ಕರೆಯಬೇಕಾಗಿತ್ತೋ ಅಥವಾ ಕರೆಯುವುದು ಅವಶ್ಯಕವಾಗಿತ್ತೋ ಆಗ ಸಭೆಯನ್ನು ಕರೆಯಲು ಮತ್ತು ಮತ್ತು ಸಭೆಯ ಅಧ್ಯಕ್ಷತೆಯನ್ನು ವಹಿಸಲು ತಪ್ಪಿದರೆ, ಸಂಬಂಧಪಟ್ಟ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಅಥವಾ ಸಂದರ್ಭಾನುಸಾರವಾಗಿ ಕಾರ್ಯದರ್ಶಿಯವರು ಅಂಥ ಸಭೆಯನ್ನು ಕರೆಯತಕ್ಕದ್ದು ಮತ್ತು ಜನವಸತಿ ಸಭಾದ ಸಭೆಯಲ್ಲಿ ಉಪಸ್ಥಿತರಿರುವ ಸದಸ್ಯರು ಗ್ರಾಮ ಪಂಚಾಯತ್‌ನ ಯಾವೊಬ್ಬ ಇತರ ಮತದಾರನನ್ನು ಅಧ್ಯಕ್ಷತೆ ವಹಿಸಲು ಆಯ್ಕೆ ಮಾಡಬಹುದು.

(4) ಒಟ್ಟು ಮತದಾರರ ಪೈಕಿ ಕನಿಷ್ಠ ಐದನೇ ಒಂದರಷ್ಟು ಸದಸ್ಯರು ಅಥವಾ ಇಪ್ಪತ್ತು ಸದಸ್ಯರು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಸದಸ್ಯರ ಸಂಖ್ಯೆಯು ಜನವಸತಿ ಪ್ರದೇಶ ಸಭಾದ ಸಭೆಗೆ ಕೋರಂ ಆಗಿರತಕ್ಕದ್ದು. ಅವರ ಪೈಕಿ ಶೇಕಡಾ ಮೂವತ್ತಕ್ಕೆ ಕಡಿಮೆಯಿಲ್ಲದಷ್ಟು ಮಹಿಳೆಯರು ಇರತಕ್ಕದ್ದು ಮತ್ತು ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ವ್ಯಕ್ತಿಗಳು ಅವರವರ ಜನಸಂಖ್ಯೆಯ ದಾಮಾಷಾ ಪ್ರಮಾಣಕ್ಕೆ ಅನುಸಾರವಾಗಿ ಜನವಸತಿ ಪ್ರದೇಶದ ಸಭಾದ ಸಭೆಯಲ್ಲಿ ಇರತಕ್ಕದ್ದು:

ಪರಂತು, ಮುಂದೂಡಿದ ಸಭೆಗೆ ಯಾವುದೇ ಕೋರಂನ ಅಗತ್ಯ ಇರತಕ್ಕದ್ದಲ್ಲ.

(5) ನಡೆದ ಸಭೆಯಲ್ಲಿ ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ ಎಲ್ಲಾ ನಿರ್ಣಯಗಳನ್ನು ಹಾಜರಿದ್ದು ಮತ ಚಲಾಯಿಸುವ ಸದಸ್ಯರ ಬಹುಮತದಿಂದ ಅಂಗೀಕರಿಸತಕ್ಕದ್ದು :

ಪರಂತು, ಆಸಕ್ತ ಗುಂಪು ಒತ್ತು ನೀಡಿದ ಅಗತ್ಯತೆಗಳನ್ನು ಜನವಸತಿ ಸಭಾದ ಸಭೆಯಲ್ಲಿ ಚರ್ಚಿಸತಕ್ಕದ್ದು ಮತ್ತು ಅದನ್ನು ತನ್ನದೆಂಬಂತೆಯೆ ದಾಖಲಿಸತಕ್ಕದ್ದು ಹಾಗೂ ಗ್ರಾಮಸಭೆಯ ಸಭೆಯಲ್ಲಿ ಮಂಡಿಸಲು ಗ್ರಾಮ ಸಭೆಗೆ ಅದನ್ನು ಕಳುಹಿಸತಕ್ಕದ್ದು.

(6) ಸಭೆಗಳನ್ನು ಕರೆಯುವುದಕ್ಕೆ ಮತ್ತು ನಡೆಸುವುದಕ್ಕೆ ಅಗತ್ಯವಾದ ಕಾರ್ಯವಿಧಾನವು ಗೊತ್ತುಪಡಿಸಬಹುದಾದಂತೆ ಇರತಕ್ಕದ್ದು.

(7) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಜನವಸತಿ ಪ್ರದೇಶದ ವಿಶೇಷ ಸಭೆಯನ್ನು ಪಂಚಾಯತಿ ಅಭಿವೃದ್ಧಿ ಅಧಿಕಾರಿ ಅಥವಾ ಸಂದರ್ಭಾನುಸಾರವಾಗಿ ಕಾರ್ಯದರ್ಶಿಯು, ಜನವಸತಿ ಪ್ರದೇಶದ ಮತದಾರರ ಕೊನೆಯ ಪಕ್ಷ ಶೇಕಡಾ 10 ರಷ್ಟು ಕಡಿಮೆಯಲ್ಲದ ಮತದಾರರು ಸಭೆಯಲ್ಲಿ ಚರ್ಚಿಸಬೇಕಾದ ವಿಷಯವನ್ನು ನಿರ್ದಿಷ್ಟಪಡಿಸಿ, ಲಿಖಿತ ಮನವಿಯನ್ನು ಸಲ್ಲಿಸಿದಾಗ ಕರೆಯತಕ್ಕದ್ದು:

ಪರಂತು, ಮೂರು ತಿಂಗಳ ಅವಧಿಯೊಳಗೆ ಎರಡು ಸಲ ವಿಶೇಷ ಸಭೆಗಳನ್ನು ಕರೆಯತಕ್ಕದ್ದಲ್ಲ.

(8) (1)ನೇ ಅಥವಾ (2)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಪ್ರಕೃತಿ ವಿಕೋಪ ಉಂಟಾದಾಗ ಅಥವಾ ಸಾರ್ವಜನಿಕ ಮಹತ್ವದ ತುರ್ತು ವಿಷಯದ ಸಂದರ್ಭದಲ್ಲಿ ಜನವಸತಿ ಪ್ರದೇಶದ ತುರ್ತು ಸಭೆಯನ್ನು ಸಂಬಂಧಪಟ್ಟ ಜನವಸತಿ ಪ್ರದೇಶದ ಚುನಾಯಿತ ಸದಸ್ಯರು ಕರೆಯಬಹುದು ಮತ್ತು ಸದರಿ ಜನವಸತಿ ಪ್ರದೇಶದ ಚುನಾಯಿತ ಸದಸ್ಯರು ಮತ್ತು ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ಅಥವಾ ಸಂಬಂಧಪಟ್ಟ ಗ್ರಾಮ ಪಂಚಾಯತ್‌ಗೆ ಚುನಾಯಿತರಾಗಿರುವ ಯಾವೊಬ್ಬ ಸದಸ್ಯರು ಅಂಥ ತುರ್ತು ಸಭೆಗೆ ಹಾಜರಾಗತಕ್ಕದ್ದು. ಅಧ್ಯಕ್ಷರು ಅಂಥ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಅವರ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷರು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(9) ಆಸಕ್ತ ಗುಂಪು ಅಗತ್ಯ ಉಂಟಾದಾಗಲೆಲ್ಲ ಸಭೆಗಳನ್ನು ನಡೆಸಲು ಮುಂದಾದರೆ ಮತ್ತು ಗ್ರಾಮ ಪಂಚಾಯತ್‌ನ ನಿಯತ ಸಭೆಗಳ ಮುಂದೆ ಮಂಡಿಸುವುದಕ್ಕಾಗಿ ಸಲಹೆಗಳ ಸಹಿತ ತಮ್ಮ ತಮ್ಮ ಗುಂಪುಗಳ ಅಭಿವೃದ್ಧಿ ಅಗತ್ಯಗಳಿಗೆ ಒತ್ತು ನೀಡಿ ಒಟ್ಟಾಗಿ ಮುಂದೆ ಬಂದಾಗ ಸಭೆ ನಡೆಸಲು (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿರುವುದು ಯಾವುದೂ, ಅಡ್ಡಿ ಪಡಿಸುತ್ತದೆಂದು ಅರ್ಥೈಸತಕ್ಕದ್ದಲ್ಲ.

**3ಸಿ. ವಾರ್ಡ್ ಸಭಾ.–** ವಾರ್ಡ್ ಸಭೆಯು ತನ್ನ ಸಂಬಂಧಪಟ್ಟ ಅಧಿಕಾರವ್ಯಾಪ್ತಿಯೊಳಗೆ ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು:–

(i) ವಾರ್ಡ್ ಸಭಾ ಪ್ರದೇಶದಲ್ಲಿ ಅನುಷ್ಠಾನಗೊಳಿಸಬೇಕಾದ ಯೋಜನೆಗಳ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳ ಪ್ರಸ್ತಾವನೆಗಳನ್ನು ಸಿದ್ಧಪಡಿಸುವುದು ಮತ್ತು ಆದ್ಯತೆಯನ್ನು ನಿರ್ಧರಿಸುವುದು ಮತ್ತು ಅದನ್ನು ಸಂಬಂಧಪಟ್ಟ ಗ್ರಾಮ ಪಂಚಾಯತ್ ಅಭಿವೃದ್ಧಿ ಯೋಜನೆಯಲ್ಲಿ ಸೇರಿಸುವುದಕ್ಕಾಗಿ ಅದನ್ನು ಗ್ರಾಮ ಸಭೆಗೆ ಕಳುಹಿಸಿಕೊಡುವುದು;

(ii) ನಿಗದಿಪಡಿಸುವ ಮಾನದಂಡಗಳ ಆಧಾರದ ಮೇಲೆ ಫಲಾನುಭವಿ ಆಧಾರಿತ ಯೋಜನೆಗಳಿಗಾಗಿ ವಾರ್ಡ್ ಸಭೆಯ ಪ್ರದೇಶದಿಂದ ಅತ್ಯಂತ ಅರ್ಹತೆಯುಳ್ಳ ವ್ಯಕ್ತಿಗಳನ್ನು ಗುರುತಿಸುವುದು ಮತ್ತು ಆದ್ಯತೆಗಳ ಅನುಸಾರ ಅರ್ಹ ಫಲಾನುಭವಿಗಳ

ಪಟ್ಟಿಯನ್ನು ಸಿದ್ಧಪಡಿಸುವುದು ಮತ್ತು ಅದನ್ನು ಗ್ರಾಮಪಂಚಾಯತ್ ಅಭಿವೃದ್ಧಿ ಯೋಜನೆಯಲ್ಲಿ ಸೇರಿಸುವುದಕ್ಕಾಗಿ ಅದನ್ನು ಕಳುಹಿಸಿಕೊಡುವುದು;

(iii) ಸರ್ಕಾರದಿಂದ ಪಿಂಚಣಿ ಮತ್ತು ಸಬ್ಸಿಡಿಗಳಂಥ ವಿವಿಧ ರೀತಿಯ ಕಲ್ಯಾಣ ಕಾರ್ಯಕ್ರಮಗಳ ನೆರವುಗಳನ್ನು ಪಡೆಯುವುದಕ್ಕಾಗಿ ವ್ಯಕ್ತಿಗಳ ಅರ್ಹತೆಯನ್ನು ಪರಿಶೀಲಿಸುವುದು;

(iv) ವಾರ್ಡ್ ಸಭಾದ ಸಭೆಯ ತರುವಾಯ ಮುಂದಿನ ಆರು ತಿಂಗಳುಗಳಲ್ಲಿ ಕಾರ್ಯರೂಪಕ್ಕೆ ತರಬೇಕೆಂದು ಉದ್ದೇಶಿಸಿರುವ ಸೇವೆಗಳಿಗೆ ಮತ್ತು ಕಾಮಗಾರಿಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಯ ಅಧಿಕಾರಿಗಳಿಂದ ಮಾಹಿತಿಯನ್ನು ಪಡೆದುಕೊಳ್ಳುವುದು;

(v) ವಾರ್ಡ್ ಸಭಾ ಪ್ರದೇಶಕ್ಕೆ ಸಂಬಂಧಪಟ್ಟಂತೆ ಗ್ರಾಮ ಪಂಚಾಯತ್‌ವು ತೆಗೆದುಕೊಂಡ ಪ್ರತಿಯೊಂದು ತೀರ್ಮಾನಕ್ಕೆ ಇರುವ ಸಕಾರಣಗಳ ಬಗ್ಗೆ ಗ್ರಾಮ ಪಂಚಾಯತಿಯಿಂದ ಮಾಹಿತಿಯನ್ನು ಪಡೆದುಕೊಳ್ಳುವುದು;

(vi) ವಾರ್ಡ್ ಸಭಾ ತೀರ್ಮಾನಗಳ ಮೇಲೆ ಕೈಗೊಂಡ ಕ್ರಮದ ಬಗ್ಗೆ ಗ್ರಾಮ ಪಂಚಾಯತ್‌ನಿಂದ ಮಾಹಿತಿ ಪಡೆದುಕೊಳ್ಳುವುದು;

(vii) ಕೆಲಸ ಮಾಡಲು ತಾವಾಗಿಯೇ ಬರುವಂಥ ಕೆಲಸಗಾರರನ್ನು ಒದಗಿಸುವುದು ಮತ್ತು ಅಭಿವೃದ್ಧಿ ಕಾಮಗಾರಿಗಳಿಗಾಗಿ ನಗದು ರೂಪದಲ್ಲಿ ಹಾಗೂ ವಸ್ತು ರೂಪದಲ್ಲಿ ಕೊಡುಗೆಗಳನ್ನು ಸಂಗ್ರಹಿಸುವುದು ಮತ್ತು ಸ್ವಯಂಸೇವಾ ತಂಡಗಳ ಮೂಲಕ ಅಂಥ ಅಭಿವೃದ್ಧಿ ಕಾಮಗಾರಿಗಳ ಮೇಲ್ವಿಚಾರಣೆನಡೆಸುವುದು;

(viii) ವಾರ್ಡ್ ಸಭಾ ಸದಸ್ಯರು ಗ್ರಾಮ ಪಂಚಾಯತಿಗೆ ತೆರಿಗೆಗಳನ್ನು ಮತ್ತು ಮರುಪಾವತಿ ಮಾಡಬೇಕಾದ ಸಾಲಗಳನ್ನು ಸಂದಾಯ ಮಾಡಿರುವುದನ್ನು ಸುನಿಶ್ಚಿತಪಡಿಸಿ ಕೊಳ್ಳುವುದು;

(ix) ವಾರ್ಡ್ ಸಭೆಯ ಪ್ರದೇಶದಲ್ಲಿ ಬೀದಿ ದೀಪಗಳನ್ನು ಅಳವಡಿಸುವುದು, ಸಮುದಾಯ ನೀರು ಕೊಳಾಯಿಗಳಿಗೆ, ಸಾರ್ವಜನಿಕ ಬಾವಿಗಳಿಗೆ, ಸಾರ್ವಜನಿಕ ನೈರ್ಮಲ್ಯ ಘಟಕಗಳಿಗೆ, ನೀರಾವರಿ ಸೌಲಭ್ಯಗಳಿಗೆ ಮತ್ತು ಅಂತಹ ಇತರ ಸಾರ್ವಜನಿಕ ಸೌಲಭ್ಯದ ಯೋಜನೆಗಳಿಗೆ ಆದ್ಯತೆಯನ್ನು ನೀಡುವುದು;

(x) ವಾರ್ಡ್ ಸಭಾ ಪ್ರದೇಶದಲ್ಲಿ ನೀರು ಸರಬರಾಜು ಮತ್ತು ಬೀದಿ ದೀಪದ ವ್ಯವಸ್ಥೆಯಲ್ಲಿ ಇರುವ ಕುಂದುಕೊರತೆಗಳನ್ನು ಗುರುತಿಸುವುದು ಮತ್ತು ಪರಿಹಾರ ಕ್ರಮಗಳನ್ನು ಸೂಚಿಸುವುದು;

(xi) ಸ್ವಚ್ಛತೆ, ಪರಿಸರ ಸಂರಕ್ಷಣೆ ಮತ್ತು ಮಾಲಿನ್ಯ ನಿವಾರಣೆಗಳಂಥ ಸಾರ್ವಜನಿಕ ಕಳಕಳಿಯ ವಿಷಯಗಳಿಗೆ ಸಂಬಂಧಿಸಿದಂತೆ ಅರಿವನ್ನು ಉಂಟುಮಾಡುವುದು;

(xii) ವಾರ್ಡ್ ಸಭಾ ಪ್ರದೇಶದಲ್ಲಿ ನೈರ್ಮಲ್ಯ ವ್ಯವಸ್ಥೆಗಳನ್ನು ಒದಗಿಸುವುದಕ್ಕಾಗಿ ಸ್ವಚ್ಛ ಮತ್ತು ಬಯಲು ಬಹಿರ್ದೆಸೆ ಮುಕ್ತ ಗ್ರಾಮವನ್ನಾಗಿ ಪರಿವರ್ತಿಸುವುದಕ್ಕೆ ಗ್ರಾಮ ಪಂಚಾಯತಿಯ ನೌಕರರಿಗೆ ನೆರವಾಗುವುದು ಹಾಗೂ ಕಸವನ್ನು ತೆಗೆದು ಹಾಕುವುದಕ್ಕಾಗಿ ಸ್ವಯಂ ಸೇವೆ ಸಲ್ಲಿಸುವುದು;

(xiii) ವಾರ್ಡ್ ಸಭಾ ಪ್ರದೇಶದ ಒಳಗೆ ವಯಸ್ಕರ ಶಿಕ್ಷಣ ಕಾರ್ಯಕ್ರಮಗಳಿಗೆ ಉತ್ತೇಜನ ನೀಡುವುದು;

(xiv) ವಾರ್ಡ್ ಸಭಾ ಪ್ರದೇಶದಲ್ಲಿ ಸಾರ್ವಜನಿಕ ಆರೋಗ್ಯ ಕೇಂದ್ರಗಳ ಚಟುವಟಿಕೆಗಳಲ್ಲಿ ಅದರಲ್ಲೂ ಮುಖ್ಯವಾಗಿ ರೋಗ ನಿವಾರಣೆ ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಗಳಿಗೆ ನೆರವಾಗುವುದು ಮತ್ತು ಸಾಂಕ್ರಾಮಿಕ ರೋಗಗಳು ಹರಡಿರುವ ಮತ್ತು ನೈಸರ್ಗಿಕ ವಿಪತ್ತುಗಳ ಸಂದರ್ಭದಲ್ಲಿ ಕೂಡಲೇ ವರದಿ ಮಾಡುವುದು;

(xv) ವಾರ್ಡ್ ಸಭಾ ಪ್ರದೇಶದಲ್ಲಿರುವ ಜನರ ವಿವಿಧ ಗುಂಪುಗಳು ಪರಸ್ಪರ ಸಾಮರಸ್ಯದಿಂದ ಮತ್ತು ಐಕ್ಯತೆಯಿಂದ ಇರುವುದಕ್ಕೆ ಉತ್ತೇಜನ ನೀಡುವುದಕ್ಕಾಗಿ ಮತ್ತು ಸ್ಥಳೀಯ ಜನರ ಪ್ರತಿಭೆಯನ್ನು ಪ್ರೋತ್ಸಾಹಿಸುವುದಕ್ಕಾಗಿ ಸಾಂಸ್ಕೃತಿಕ ಉತ್ಸವಗಳನ್ನು ಮತ್ತು ಕ್ರೀಡಾಕೂಟಗಳನ್ನು ಏರ್ಪಾಡು ಮಾಡುವುದು;

(xvi) ಗ್ರಾಮ ಪಂಚಾಯತಿಯ ಅಧಿಕಾರಿ ವರ್ಗದವರು (functionaries) ಯಾವ ಯಾವ ಸೇವೆಗಳನ್ನು ಸಲ್ಲಿಸಬೇಕಾಗುತ್ತದೆ, ಅವರು ಯಾವ ಯಾವ ಕಾರ್ಯಕ್ರಮಗಳನ್ನು ಮತ್ತು ಯೋಜನೆಗಳನ್ನು ಕಾರ್ಯರೂಪಕ್ಕೆ ತರಬೇಕಾಗುತ್ತದೆ ಮತ್ತು ವಾರ್ಡ್ ಸಭಾದ ಸಭೆಯು ನಡೆದ ನಂತರದ ತರುವಾಯ ಬರುವ ಆರು ತಿಂಗಳ ಅವಧಿಯಲ್ಲಿ ಅವರು ಯಾವ ಯಾವ ಸಾರ್ವಜನಿಕ ಕಾಮಗಾರಿಗಳನ್ನು ಕೈಗೊಳ್ಳಲು ಉದ್ದೇಶಿಸಿದ್ದಾರೋ ಅವುಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಪಡೆದುಕೊಳ್ಳುವುದು;

(xvii) ಆಯಾ ವಾರ್ಡ್‌ಗೆ ಸಂಬಂಧಿಸಿದಂತೆ ಗ್ರಾಮಸಭಾ ಕೈಗೊಂಡ ತೀರ್ಮಾನಗಳ ಮೇಲೆ ತೆಗೆದುಕೊಂಡ ಕ್ರಮಗಳ ಬಗ್ಗೆ ಗ್ರಾಮಪಂಚಾಯತ್‌ನಿಂದ ಮಾಹಿತಿಯನ್ನು ಪಡೆಯುವುದು;

(xviii) ಸಾರ್ವಜನಿಕ ಹಿತಾಸಕ್ತಿಗೆ ಅಥವಾ ಆರೋಗ್ಯಕ್ಕೆ ಮತ್ತು ವಾರ್ಡ್ ಸಭೆಯ ನಿವಾಸಿಗಳ ಸುರಕ್ಷತೆಗೆ ಬಾಧಕವಾಗುವ ಯಾವುದೇ ಇತರ ಚಟುವಟಿಕೆಗಳನ್ನು ತಡೆಯುವುದಕ್ಕೆ ಗ್ರಾಮಪಂಚಾಯತಿಗೆ ನೆರವಾಗುವುದು; ಮತ್ತು

(xix) ನಿಯಮಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಅಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದು.

**3ಡಿ. ವಾರ್ಡ್ ಸಭಾದ ಸಭೆಗಳು.–** (1) ವಾರ್ಡ್ ಸಭಾ, ತನ್ನ ಕಾರ್ಯಕಲಾಪಗಳ ನಿರ್ವಹಣೆಗಾಗಿ ಆರು ತಿಂಗಳಲ್ಲಿ ಒಂದು ಬಾರಿ ಸಭೆಯನ್ನು ನಡೆಸತಕ್ಕದ್ದು, ಆ ಯಾವುದೇ ಸಭೆಯು ಗ್ರಾಮಸಭಾದ ಸಭೆ ನಡೆಯುವುದಕ್ಕೆ ಕನಿಷ್ಠ ಪಕ್ಷ ಒಂದು ತಿಂಗಳ ಮೊದಲು ನಡೆಯತಕ್ಕದ್ದು ಮತ್ತು ಸಭೆಯ ನಡವಳಿಕೆಯ ರೀತಿಯು ಈ ಮುಂದೆ ಹೇಳಿರುವಂತೆ ಇರತಕ್ಕದ್ದು, ಎಂದರೆ:–

(i) ನಡೆಯುವ ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ಆ ವಾರ್ಡ್ ಪ್ರದೇಶದಿಂದ ಚುನಾಯಿತನಾದ ಗ್ರಾಮ ಪಂಚಾಯತ್‌ನ ಸದಸ್ಯನು ಮತ್ತು ಸಂದರ್ಭಾನುಸಾರವಾಗಿ ಆತನ/ಅವಳ ಅನುಪಸ್ಥಿತಿಯಲ್ಲಿ ಸದರಿ ಚುನಾಯಿಸಲ್ಪಟ್ಟ ಗ್ರಾಮ ಪಂಚಾಯತ್‌ನ ಇತರ ಯಾವೊಬ್ಬ ಮತದಾರನು ವಹಿಸತಕ್ಕದ್ದು. ವಾರ್ಡ್‌ಸಭಾವನ್ನು ಪ್ರತಿನಿಧಿಸುವ ಚುನಾಯಿತ ಸದಸ್ಯರ ಸಂಖ್ಯೆಯು ಒಂದಕ್ಕಿಂತ ಹೆಚ್ಚಾಗಿರುವ ಸಂದರ್ಭದಲ್ಲಿ, ಗ್ರಾಮಪಂಚಾಯತಿಯಿಂದ ನಿರ್ಧರಿಸಲ್ಪಟ್ಟ ತಮ್ಮ ಪೈಕಿಯೇ ಚುನಾಯಿತನಾದ ಸದಸ್ಯನೊಬ್ಬನು ಅಂಥ ಸಭೆಯನ್ನು ಕರೆಯತಕ್ಕದ್ದು.

(ii) ವಾರ್ಡ್ ಸಭೆಯನ್ನು ಕರೆಯಬೇಕಾದಾಗ ಅಥವಾ ವಾರ್ಡ್ ಸಭೆಯನ್ನು ನಡೆಸುವುದು ಅವಶ್ಯಕವಾಗಿರುವಾಗ, ವಾರ್ಡ್‌ನ ಚುನಾಯಿತ ಸದಸ್ಯನು ಸಂದರ್ಭಾನುಸಾರ ವಾರ್ಡ್ ಸಭೆಯನ್ನು ಕರೆಯುವುದಕ್ಕೆ ಮತ್ತು ಸಂದರ್ಭಾನುಸಾರವಾಗಿ ಅಧ್ಯಕ್ಷತೆ ವಹಿಸುವುದಕ್ಕೆ ವಿಫಲನಾಗಿದ್ದರೆ, ಆತನು ಗ್ರಾಮಪಂಚಾಯಿತಿ ನಿಧಿಗೆ ಒಂದು ನೂರು ರೂಪಾಯಿಗಳನ್ನು ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು ಮತ್ತು ಅಂಥ ವಿಫಲತೆಗೆ ವಿವರಣೆಯನ್ನು ನೀಡತಕ್ಕದ್ದು. ತದನಂತರ ಸಂಬಂಧಿಸಿದ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಅಥವಾ ಸಂದರ್ಭಾನುಸಾರವಾಗಿ ಕಾರ್ಯದರ್ಶಿಯವರು ಅಂಥ ಸಭೆಯನ್ನು ಕರೆಯತಕ್ಕದ್ದು ಮತ್ತು ವಾರ್ಡ್ ಸಭಾದ ಸಭೆಯಲ್ಲಿ ಹಾಜರಿರುವ ಸದಸ್ಯರುಗಳು ಆಯ್ಕೆ ಮಾಡಬಹುದಾದ, ಗ್ರಾಮ ಪಂಚಾಯತ್‌ನ ಇತರ ಯಾರೇ ಮತದಾರನು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು:

(iii) ವಾರ್ಡ್ ಸಭಾದ ಒಟ್ಟು ಮತದಾರರ ಕನಿಷ್ಠ ಐದನೇ ಒಂದರಷ್ಟು ಅಥವಾ ಅದರ ಇಪ್ಪತ್ತು ಸದಸ್ಯರುಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಸದಸ್ಯರು ವಾರ್ಡ್ ಸಭಾದ ಸಭೆಗೆ ಕೋರಂ ಆಗಿರತಕ್ಕದ್ದು, ಈ ಪೈಕಿ ಕನಿಷ್ಠ ಪಕ್ಷ ಶೇಕಡಾ ಮೂವತ್ತರಷ್ಟು ಮಹಿಳೆಯರು ಇರತಕ್ಕದ್ದು ಮತ್ತು ಅನುಸೂಚಿತ ಜಾತಿಯ ಮತ್ತು ಅನುಸೂಚಿತ ಪಂಗಡಗಳ ವ್ಯಕ್ತಿಗಳು ಅವರ ಜನಸಂಖ್ಯೆಗೆ ಅನುಗುಣವಾದ ಪ್ರಮಾಣದಲ್ಲಿ ಇರತಕ್ಕದ್ದು:

ಪರಂತು, ಮುಂದೂಡಿದ ಸಭೆಗೆ ಕೋರಂನ ಅಗತ್ಯ ಇರತಕ್ಕದ್ದಲ್ಲ.

(iv) ಈ ಪ್ರಕರಣದ ಮೇರೆಗೆ ನಡೆದ ಸಭೆಯಲ್ಲಿ ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ ಇರುವಂಥ ಎಲ್ಲಾ ನಿರ್ಣಯಗಳನ್ನು ಸಭೆಯಲ್ಲಿ ಹಾಜರಿದ್ದು ಮತ ಚಲಾಯಿಸುವ ಸದಸ್ಯರುಗಳ ಬಹುಮತದಿಂದ ಅಂಗೀಕರಿಸತಕ್ಕದ್ದು:

ಪರಂತು, ಆ ಸಭೆಯಲ್ಲಿ, ಸಂಬಂಧಪಟ್ಟ ಗುಂಪು ನಿರೂಪಿಸಿದ ಅಗತ್ಯತೆಗಳನ್ನು ವಾರ್ಡ್ ಸಭಾದ ಸಭೆಗಳಲ್ಲಿ ಇಡತಕ್ಕದ್ದು ಮತ್ತು ಅದನ್ನು ಅದು ತನ್ನದೇ ಎಂಬಂತೆ ಭಾವಿಸಿ ದಾಖಲಿಸಿಕೊಳ್ಳತಕ್ಕದ್ದು ಮತ್ತು ಅದನ್ನು ಗ್ರಾಮ ಸಭಾಕ್ಕೆ ಕಳುಹಿಸಿ ಕೊಡತಕ್ಕದ್ದು.

(v) ಸಭೆಗಳನ್ನು ಕರೆಯುವುದಕ್ಕೆ ಮತ್ತು ನಡೆಸುವುದಕ್ಕೆ ಅಗತ್ಯವಾದ ಕಾರ್ಯವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ವಾರ್ಡ್ ಸಭಾದ ವಿಶೇಷ ಸಭೆಯನ್ನು ಕರೆಯಬೇಕೆಂದು ವಾರ್ಡ್‌ನ ಕನಿಷ್ಠ ಪಕ್ಷ ಶೇಕಡ ಹತ್ತರಷ್ಟು ಮತದಾರರು ಲಿಖಿತದಲ್ಲಿ ಮನವಿ ಸಲ್ಲಿಸಿದಾಗ ಮತ್ತು ವಿಷಯವನ್ನು ನಿರ್ದಿಷ್ಟ ಪಡಿಸಿದ್ದಾಗ ಸಭೆಯನ್ನು ಕರೆಯತಕ್ಕದ್ದು:

ಪರಂತು, ಮೂರು ತಿಂಗಳುಗಳ ಅವಧಿಯೊಳಗೆ ಎರಡು ಸಲ ವಿಶೇಷ ಸಭೆಗಳನ್ನು ನಡೆಸತಕ್ಕದ್ದಲ್ಲ.

(3) (1)ನೇ ಅಥವಾ (2)ನೇ ಉಪಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಪ್ರಕೃತಿ ವಿಕೋಪಗಳು ಸಂಭವಿಸಿದಾಗ ಅಥವಾ ಸಾರ್ವಜನಿಕ ಪ್ರಾಮುಖ್ಯತೆಯ ತುರ್ತು ವಿಷಯದ ಸಂದರ್ಭದಲ್ಲಿ, ವಾರ್ಡ್ ಸಭಾದ ತುರ್ತು ಸಭೆಗಳನ್ನು ಕರೆಯಬಹುದು ಮತ್ತು ಸದರಿ ವಾರ್ಡಿಗೆ ಚುನಾಯಿತರಾದ ಸದಸ್ಯರು ಮತ್ತು ಸಂಬಂಧಪಟ್ಟ ಗ್ರಾಮ ಪಂಚಾಯತಿಯ ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ಅಥವಾ ಯಾರೇ ಚುನಾಯಿತ ಸದಸ್ಯರುಗಳು ಅಂಥ ತುರ್ತು ಸಭೆಗೆ, ಹಾಜರಾಗುವುದು ಅಗತ್ಯವಾಗಿರತಕ್ಕದ್ದು. ಅಧ್ಯಕ್ಷನು ಅಂಥ ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಆತನ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷನು ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(4) ಬಾಧಿತ ಗುಂಪುಗಳು ಸಭೆಗಳನ್ನು ನಡೆಸುವುದಕ್ಕೆ ಮುಂದಾದರೆ ಮತ್ತು ಗ್ರಾಮ ಸಭೆಯ ನಿಯತ ಸಭೆಗಳ ಮುಂದೆ ಮಂಡಿಸುವುದಕ್ಕೆ ಸಲಹೆಗಳ ಸಮೇತ ತಮ್ಮ ತಮ್ಮಲ್ಲೇ ಗುಂಪುಗಳ ಅಭಿವೃದ್ಧಿಗೆ ಒತ್ತು ನೀಡಿ ಒಟ್ಟಾಗಿ ಮುಂದೆ ಬಂದಾಗ ಸಭೆ ನಡೆಸಲು (1)ನೇ ಉಪಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ ಅಡ್ಡಿಪಡಿಸುತ್ತದೆಂದು ಅರ್ಥೈಸತಕ್ಕದ್ದಲ್ಲ.

**3ಇ. ಗ್ರಾಮಸಭೆ.–** (1) ಗ್ರಾಮ ಸಭಾವು, ಗ್ರಾಮ ಪಂಚಾಯತಿಯಲ್ಲಿ ಅನುಷ್ಠಾನಗೊಳ್ಳುವ ಎಲ್ಲಾ ರೀತಿಯ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಪರಿಸರ ಅಭಿವೃದ್ಧಿ ಕಾರ್ಯಕ್ರಮಗಳ ಮತ್ತು ಕೇಂದ್ರ, ರಾಜ್ಯ ಮತ್ತು ಜಿಲ್ಲಾ ವಲಯದ ಎಲ್ಲಾ ಸರ್ಕಾರಿ ಸ್ಕೀಮುಗಳನ್ನು ಯೋಜಿಸುವಲ್ಲಿ ಅನುಷ್ಠಾನಕ್ಕೆ ತರುವುದರಲ್ಲಿ, ಮೇಲ್ವಿಚಾರಣೆ ಮಾಡುವುದರಲ್ಲಿ ಮತ್ತು ಮೌಲ್ಯಮಾಪನ ಮಾಡುವುದರಲ್ಲಿ ಗ್ರಾಮದ ಎಲ್ಲಾ ನಾಗರಿಕರು ನೇರವಾಗಿ ಭಾಗಿಯಾಗಿರುವುದನ್ನು ಸುನಿಶ್ಚಿತಪಡಿಸಿಕೊಳ್ಳಲು ಗ್ರಾಮಸಭಾ, ಗ್ರಾಮಮಟ್ಟದಲ್ಲಿ ಸ್ಥಳೀಯ ಸ್ವಯಂ ಆಡಳಿತದ ಮೂಲ ಘಟಕವಾಗಿರತಕ್ಕದ್ದು.

(2) ಗ್ರಾಮಸಭೆಯ ಪ್ರಕಾರ್ಯಗಳು ತಮ್ಮ ಸಂಬಂಧಿತ ಅಧಿಕಾರ ವ್ಯಾಪ್ತಿಯೊಳಗೆ ಗ್ರಾಮಪಂಚಾಯತಿಗೆ ನೆರವು ನೀಡುವುದಕ್ಕಾಗಿ ಇರತಕ್ಕದ್ದು ಮತ್ತು ಈ ಮುಂದಿನ ಪ್ರಕಾರ್ಯಗಳನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ದೂರದೃಷ್ಟಿ ಯೋಜನೆಯನ್ನು ಸಂಕಲಿಸಲು ಮತ್ತು ರೂಪಿಸಲು ಗ್ರಾಮ ಪಂಚಾಯತ್‌ಗೆ ಸಾಧ್ಯವಾಗುವಂತೆ ಮಾಡುವ ಸಲುವಾಗಿ ಗ್ರಾಮದ ಅಭಿವೃದ್ಧಿಗಾಗಿ ಸಮೀಕ್ಷೆಗಳನ್ನು ನಡೆಸುವುದಕ್ಕೆ ಮತ್ತು ಗ್ರಾಮೀಣ ಪರಾಮರ್ಶನದಲ್ಲಿ ಭಾಗವಹಿಸುವುದಕ್ಕೆ ಅಥವಾ ಅತ್ಯಾವಶ್ಯಕ ಸಮಾಜೋ–ಆರ್ಥಿಕ ದತ್ತಾಂಶವನ್ನು ಸಂಗ್ರಹಿಸಲು ನಿವಾಸಿಗಳ ಅವಶ್ಯಕತೆಗಳನ್ನು ನಿರ್ಧರಿಸಲು ನೆರವಾಗುವುದು.

(ಬಿ) ಜನವಸತಿ ಸಭಾಗಳ ಸಲಹೆಗಳನ್ನು ಪರಿಗಣಿಸಿದ ನಂತರ ಬೀದಿ ದೀಪಗಳನ್ನು, ಅಳವಡಿಸಲು ಬೀದಿಯು ಅಥವಾ ಸಮುದಾಯದ ನೀರಿನ ನಲ್ಲಿಗಳು, ಸಾರ್ವಜನಿಕ ಬಾವಿಗಳು, ಸಾರ್ವಜನಿಕ ನೈರ್ಮಲ್ಯೀಕರಣ ಘಟಕಗಳು, ನೀರಾವರಿ ಸೌಲಭ್ಯಗಳನ್ನು ಮತ್ತು ಅಂತಹ ಇತರ ಸಾರ್ವಜನಿಕ ಸೌಕರ್ಯ ಸ್ಕೀಮುಗಳನ್ನು ಒದಗಿಸಲು ಸ್ಥಳಗಳನ್ನು ಆದ್ಯತೀಕರಿಸುವುದು ಮತ್ತು ಕೊರತೆಗಳನ್ನು ಗುರುತಿಸುವುದು ಮತ್ತು ಅವುಗಳಿಗೆ ಪರಿಹಾರಾತ್ಮಕ ಕ್ರಮಗಳನ್ನು ಸೂಚಿಸುವುದು ಹಾಗೂ ಕಾಮಗಾರಿ ಕಾರ್ಯವು ತೃಪ್ತಿಕರವಾಗಿ ಮುಗಿದ ಬಗ್ಗೆ ವರದಿ ಮಾಡುವುದು;

(ಸಿ) ಎಲ್ಲಾ ಯೋಜನೆಗಳು ಎಲ್ಲಾ ವರ್ಗದ ಜನರಿಗೆ ಅದರಲ್ಲೂ ವಿಶೇಷವಾಗಿ ಸುರಕ್ಷಿತವಲ್ಲದ ವರ್ಗಗಳಿಗೆ ಮತ್ತು ವಲಸೆ ಕಾರ್ಮಿಕರಿಗೆ ಪ್ರಯೋಜನಕಾರಿಯಾಗಿವೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು;

(ಡಿ) ಜನವಸತಿ ಸಭೆಗಳ ಮತ್ತು ವಾರ್ಡ್ ಸಭೆಗಳ ಅಗತ್ಯಗಳನ್ನು ಮತ್ತು ಸಲಹೆಗಳನ್ನು ಪರಿಗಣಿಸಿದ ನಂತರ, ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಯೋಜನೆಗಳು, ಕಾರ್ಯಕ್ರಮಗಳು ಮತ್ತು ಪರಿಯೋಜನೆಗಳ ನಿಧಿಗಳ ಲಭ್ಯತೆಗೆ ಒಳಪಟ್ಟು ಅಂಥ ಯೋಜನೆಗಳನ್ನು ಕಾರ್ಯಕ್ರಮಗಳನ್ನು ಮತ್ತು ಪರಿಯೋಜನೆಗಳನ್ನು ಗ್ರಾಮ ಪಂಚಾಯತಿಯು ಅನುಷ್ಠಾನಕ್ಕೆ ತೆಗೆದುಕೊಳ್ಳುವ ಮೊದಲು ಅನುಮೋದಿಸುವುದು;

(ಇ) ಪ್ರತಿಯೊಂದು ಜನವಸತಿ ಸಭಾಗಳ ಹಾಗೂ ವಾರ್ಡ್ ಸಭಾಗಳ ಅಗತ್ಯಗಳನ್ನು, ಶಿಫಾರಸ್ಸುಗಳನ್ನು ಮತ್ತು ಸಲಹೆಗಳನ್ನು ಪರಿಗಣಿಸಿದ ನಂತರ 'ಆದ್ಯತೆ ರ‍್ಯಾಂಕಿಂಗ್' ವಿಧಾನದ ಪ್ರಕಾರ ಪಂಚಾಯತ್ ಪ್ರದೇಶದಲ್ಲಿ ಅನುಷ್ಠಾನಗೊಳಿಸಬೇಕಾದ ಎಲ್ಲಾ ಸ್ಕೀಮುಗಳ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳ ಆದ್ಯತೆಯನ್ನು ನಿರ್ಧರಿಸುವ ಮೂಲಕ ಕ್ರೋಢೀಕೃತ ಪ್ರಸ್ತಾವನೆಗಳನ್ನು ಸಿದ್ಧಪಡಿಸುವುದು;

(ಎಫ್) ಬಡತನ ನಿವಾರಣೆಯ ನಿಟ್ಟಿನಲ್ಲಿ ನಿಗದಿಪಡಿಸಿದ ಮಾನದಂಡಗಳ ಆಧಾರದ ಮೇಲೆ ಪಿಂಚಣಿಗಳು ಮತ್ತು ಸಬ್ಸಿಡಿಗಳು ಮುಂತಾದವುಗಳು ಒಳಗೊಂಡಿರುವ ಬಡತನ ನಿವಾರಣೆ ಮತ್ತು ಇತರ ಕಲ್ಯಾಣ ಕಾರ್ಯಕ್ರಮಗಳಿಗೆ, ಗ್ರಾಮ ಪ್ರದೇಶದಿಂದ ಅತ್ಯಂತ ಸೂಕ್ತ ಅರ್ಹ ಫಲಾನುಭವಿಗಳನ್ನು ಗುರುತಿಸಲು ಮತ್ತು ಆಯ್ಕೆ ಮಾಡಲು ಮತ್ತು ಜನವಸತಿ ಸಭಾಗಳ ಮತ್ತು ವಾರ್ಡ್ ಸಭಾಗಳ ಅಗತ್ಯಗಳನ್ನು, ಶಿಫಾರಸ್ಸುಗಳನ್ನು ಹಾಗೂ ಸಲಹೆಗಳನ್ನು ಪರಿಶೀಲಿಸಿದ ನಂತರ 'ಆದ್ಯತಾ ರ‍್ಯಾಂಕಿಂಗ್' ವಿಧಾನದ ಪ್ರಕಾರ ಆದ್ಯತೆಯ ಕ್ರಮದಲ್ಲಿ ಇರುವಂಥ ಒಂದು ಪಟ್ಟಿಯನ್ನು ಸಿದ್ಧಪಡಿಸಲು ಮತ್ತು ಅದನ್ನು ಜನವಸತಿ ಸಭಾಗಳು ಸಭೆಯ ಮತ್ತು ವಾರ್ಡ್ ಸಭಾಗಳು ಕಳುಹಿಸಿದ ಆದ್ಯತೆಯ ಕ್ರಮದಂತೆಯೇ ಗ್ರಾಮಸಭಾವು ಅವುಗಳನ್ನು ತನ್ನ ಅಭಿವೃದ್ಧಿ ಯೋಜನೆಯಲ್ಲಿ ಸೇರಿಸಿಕೊಳ್ಳುವುದಕ್ಕಾಗಿ ಗ್ರಾಮಪಂಚಾಯತ್‌ಗೆ ಕಳುಹಿಸಲು ಜವಾಬ್ದಾರಿಯಾಗಿರತಕ್ಕದ್ದು. ಅಂತಹ ಪಟ್ಟಿಗೆ ಸಂಬಂಧಪಟ್ಟ ಗ್ರಾಮ ಪಂಚಾಯತಿಯು, ತಾಲ್ಲೂಕು ಪಂಚಾಯಿತಿಯು, ಜಿಲ್ಲಾ ಪಂಚಾಯಿತಿಯು ಹಾಗೂ ಸರ್ಕಾರವು ಬದ್ಧವಾಗಿರತಕ್ಕದ್ದು.

(3) ಗ್ರಾಮ ಸಭಾವು ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಜಾರಿಗೊಳಿಸುವಾಗ ಗ್ರಾಮ ಪಂಚಾಯತ್‌ನ ಎಲ್ಲಾ ಚಟುವಟಿಕೆಗಳಿಗೆ ಬೆಂಬಲ ನೀಡತಕ್ಕದ್ದು:-

(ಎ) ಅಭಿವೃದ್ಧಿ ಕಾಮಗಾರಿಗಳಿಗಾಗಿ ಸ್ವಯಂಸೇವಾ ಕಾರ್ಮಿಕರನ್ನು ಮತ್ತು ನಗದು ಹಾಗೂ ವಸ್ತು ಅಥವಾ ಎರಡೂ ರೂಪದಲ್ಲೂ ಕೊಡುಗೆಗಳನ್ನು ನೀಡುವ ಮೂಲಕ ಮತ್ತು ಸ್ವಯಂಸೇವಾ ಗುಂಪುಗಳಿಂದ ಅಂತಹ ಅಭಿವೃದ್ಧಿ ಕಾಮಗಾರಿಗಳನ್ನು ಮೇಲ್ವಿಚಾರಣೆ ಮಾಡಿಸುವ ಮೂಲಕ;

(ಬಿ) ಪಂಚಾಯತ್ ಪ್ರದೇಶದಲ್ಲಿ ನೈರ್ಮಲ್ಯೀಕರಣ ವ್ಯವಸ್ಥೆಗಳನ್ನು ಒದಗಿಸುವಲ್ಲಿ ಗ್ರಾಮ ಪಂಚಾಯತ್‌ನ ಕಾರ್ಯನಿರ್ವಾಹಕ ಸಿಬ್ಬಂದಿಗೆ ನೆರವು ನೀಡುವ ಮೂಲಕ ಬಯಲು ಬಹಿರ್ದೆಸೆ ಮುಕ್ತ ಸ್ವಚ್ಛ ಮತ್ತು ನಿರ್ಮಲ ಪರಿಸರವನ್ನು ಸೃಜಿಸಲು ಮತ್ತು ಗ್ರಾಮದ ಪ್ರದೇಶದಲ್ಲಿ ಕಸಕಡ್ಡಿಗಳನ್ನು ತೆಗೆದುಹಾಕಲು ಸ್ವಯಂಸೇವೆಯನ್ನು ಸಜ್ಜುಗೊಳಿಸುವ ಮೂಲಕ;

(ಸಿ) ಗ್ರಾಮದ ಪ್ರದೇಶದೊಳಗೆ ವಯಸ್ಕರ ಶಿಕ್ಷಣಕ್ಕೆ ಉತ್ತೇಜನ ನೀಡುವ ಸಾಕ್ಷರತೆಯನ್ನು ಹೆಚ್ಚಿಸುವ ಮತ್ತು ಕೌಟುಂಬಿಕ ಸಮಾಲೋಚನೆ ಮಾಡುವ ವ್ಯಕ್ತಿತ್ವ ನಿರ್ಮಾಣ ಮಾಡುವ ಮತ್ತು ಯುವಕರು, ವಯಸ್ಕರು, ಮತ್ತು ಹಿರಿಯ ನಾಗರಿಕರಲ್ಲಿ ಮದ್ಯ, ಮಾದಕ ವಸ್ತುಗಳ ನಿದ್ರಾಜನಕ ಔಷಧಗಳ ವ್ಯಸನವನ್ನು ಬಿಡಿಸಲು ಹಾಗೂ ವಿದ್ಯಾಭ್ಯಾಸದ ಮಟ್ಟವನ್ನು ಹೆಚ್ಚಿಸುವ ಕಾರ್ಯಕ್ರಮಗಳಿಗೆ ಉತ್ತೇಜನ ನೀಡುವ ಮೂಲಕ;

(ಡಿ) ಗ್ರಾಮದಲ್ಲಿ ಯಾರೇ ವ್ಯಕ್ತಿಯ, ಅದರಲ್ಲೂ ವಿಶೇಷವಾಗಿ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಮತ್ತು ಎಲ್ಲಾ ದುರ್ಬಲ ವರ್ಗಗಳ ಮಹಿಳೆಯರ ಮತ್ತು ಮಕ್ಕಳ ಹಕ್ಕುಗಳಿಗೆ ಘನತೆಗೆ ಮತ್ತು ಸ್ವಾತಂತ್ರ್ಯಕ್ಕೆ ಧಕ್ಕೆ ಉಂಟು ಮಾಡುವಂಥ ರೀತಿಯ ಸಾಂಪ್ರದಾಯಿಕ, ಸಾಮಾಜಿಕ ಮತ್ತು ಧಾರ್ಮಿಕ ಆಚರಣೆ ನಡೆಯುತ್ತಿಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳುವ ಮೂಲಕ;

(ಇ) ಪಂಚಾಯತ್ ಪ್ರದೇಶದಲ್ಲಿ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ, ಇತರ ಹಿಂದುಳಿದ ವರ್ಗಗಳ, ಹಿರಿಯ ನಾಗರಿಕರ, ವಿಕಲಚೇತನರ, ಮಹಿಳೆಯರ, ಮಕ್ಕಳ ಮತ್ತು ಯುವಜನರ ಅಭಿವೃದ್ಧಿಗಾಗಿ ಕೆಲಸ ಮಾಡುವ ಶಾಲಾಭಿವೃದ್ಧಿ ಸಮಿತಿಗಳು, ಅಂಗನವಾಡಿಗಳು, ಮಹಿಳಾ ಸಮಾಜ, ಯುವಜನ ಸಂಘಗಳು, ಸ್ವ-ಸಹಾಯ ಗುಂಪುಗಳು ಮತ್ತು ಸಂಘಟನೆಗಳ ಚಟುವಟಿಕೆಗಳಲ್ಲಿ ನೆರವಾಗುವುದು;

(ಎಫ್) ಪಂಚಾಯತ್ ಪ್ರದೇಶದಲ್ಲಿನ ಸಾರ್ವಜನಿಕ ಆರೋಗ್ಯ ಕೇಂದ್ರಗಳ ಚಟುವಟಿಕೆಗಳಿಗೆ, ಅದರಲ್ಲೂ ಮುಖ್ಯವಾಗಿ ರೋಗವನ್ನು ತಡೆಯುವಂಥ ಮತ್ತು ಸಣ್ಣ ಕುಟುಂಬ ಇರುವುದಕ್ಕೆ, ಜನಸಂಖ್ಯಾ ನಿಯಂತ್ರಣಕ್ಕೆ ಉತ್ತೇಜನ ನೀಡುವುದು ಮತ್ತು ಪಶುರೋಗಗಳನ್ನು ತಡೆಗಟ್ಟುವುದಕ್ಕೆ ಸಹಕಾರ ನೀಡುವುದು ಮತ್ತು ಸಾಂಕ್ರಾಮಿಕ ರೋಗಗಳು ಹರಡುತ್ತಿರುವುದರ ಬಗ್ಗೆ ಮತ್ತು ನೈಸರ್ಗಿಕ ವಿಪತ್ತುಗಳ ಬಗ್ಗೆ ಸಂಬಂಧಪಟ್ಟ ಕಾರ್ಯನಿರ್ವಾಹಕ ಸಿಬ್ಬಂದಿಗೆ ತತ್‌ಕ್ಷಣವೇ ವರದಿ ಮಾಡುವುದು; ಮತ್ತು

(ಜಿ) ತೆರಿಗೆಗಳನ್ನು ಮತ್ತು ಇತರ ಬಾಕಿಗಳನ್ನು ಪಾವತಿಸುವಂತೆ ಮತ್ತು ಸಾಲವನ್ನು ಮರುಪಾವತಿಸುವಂತೆ ಗ್ರಾಮಸಭೆಯ ಸದಸ್ಯರ ಮನವೊಲಿಸುವುದು;

(4) ಗ್ರಾಮಸಭೆಯು,–

(ಎ) ಸಮಾಜದ ಎಲ್ಲಾ ನಾಗರಿಕರಿಗೆ ಹಾಗೂ ಅದರಲ್ಲೂ ಮುಖ್ಯವಾಗಿ ಸಮಾಜದ ಸುರಕ್ಷಿತವಲ್ಲದ ವರ್ಗಗಳ ಜನರು ತಮ್ಮ ತಮ್ಮ ಹಕ್ಕುಗಳನ್ನು ಮುಕ್ತವಾಗಿ ಹಾಗೂ ನ್ಯಾಯೋಚಿತ ರೀತಿಯಲ್ಲಿ ಚಲಾಯಿಸಲು ಅನುವುಮಾಡಿಕೊಡುವಂಥ ಮತ್ತು ಸಾಮಾಜಿಕ ನ್ಯಾಯ ಇರುವಂಥ ಒಳ್ಳೆಯ ಪರಿಸರ ಇರುವುದನ್ನು ಸುನಿಶ್ಚಿತಪಡಿಸಿಕೊಳ್ಳತಕ್ಕದ್ದು ಮತ್ತು ಗ್ರಾಮ ಪಂಚಾಯತ್‌ಗೆ ಮತ್ತು ಅದರ ಚುನಾಯಿತ ಸದಸ್ಯರಿಗೆ ಅಥವಾ ಇಲಾಖೆಯ ಅಧಿಕಾರಿಗಳಿಗೆ ಅಥವಾ ಇಬ್ಬರಿಗೂ, ಎಲ್ಲ ನಾಗರಿಕರನ್ನು ದುರುಪಯೋಗಪಡಿಸಿಕೊಳ್ಳದಂತೆ ಮತ್ತು ಶೋಷಣೆ ಮಾಡದಂತೆ ರಕ್ಷಿಸಲು ಸೂಕ್ತ ಕ್ರಮ ಕೈಗೊಳ್ಳಲು ಸಹಾಯಕವಾಗುವಂಥ ಕ್ರಮಗಳನ್ನು ಗ್ರಾಮಪಂಚಾಯತ್‌ಗೆ ಸಲಹೆ ನೀಡತಕ್ಕದ್ದು.

(ಬಿ) ಆ ಪ್ರದೇಶದ ಸ್ಥಳೀಯ ಆಟಗಳಿಗೆ, ಸ್ಪರ್ಧೆಗಳಿಗೆ, ಆಟೋಟಗಳಿಗೆ (ಅಥ್ಲೆಟಿಕ್ಸ್) ಸಾಹಿತ್ಯಕ್ಕೆ, ಕಲೆಗೆ ಮತ್ತು ಸಂಸ್ಕೃತಿಗೆ ಉತ್ತೇಜನ ನೀಡುವಂಥ ಮತ್ತು ಪೋಷಿಸುವಂಥ ಸಾಂಸ್ಕೃತಿಕ ಹಬ್ಬಗಳನ್ನು, ಸಾಹಿತ್ಯಕ ಚಟುವಟಿಕೆಗಳನ್ನು ಮತ್ತು ಕ್ರೀಡಾ ಪಂದ್ಯಾವಳಿಗಳನ್ನು ಆಯೋಜಿಸುವುದು ಮತ್ತು ಅಲ್ಲಿನ ನಿವಾಸಿಗಳು ತಮ್ಮ ಪ್ರತಿಭೆಗಳನ್ನು ವ್ಯಕ್ತಪಡಿಸಲು ಅವಕಾಶಗಳನ್ನು ಒದಗಿಸತಕ್ಕದ್ದು;

(ಸಿ) ಸ್ವಚ್ಛತೆ, ಪರಿಸರ ಮತ್ತು ಜೀವಿ ಸಂರಕ್ಷಣೆ, ಸಾರ್ವಜನಿಕ ಉಪದ್ರವ ಮತ್ತು ಮಾಲಿನ್ಯ ತಡೆಗಟ್ಟುವಿಕೆ ಮುಂತಾದ ಸಾರ್ವಜನಿಕ ಹಿತಾಸಕ್ತಿಯ ವಿಚಾರಗಳಲ್ಲಿ ನಾಗರಿಕರಿಗೆ ಅರಿವನ್ನು ಮೂಡಿಸತಕ್ಕದ್ದು ಮತ್ತು ಗ್ರಾಮ ಪ್ರದೇಶದ ವ್ಯಾಪ್ತಿಯೊಳಗೆ ಎಲ್ಲಾ ಸಾರ್ವಜನಿಕ ಶಾಂತಿ, ಸುರಕ್ಷತೆ ಮತ್ತು ಭದ್ರತೆ ಇರುವುದನ್ನು ಸುನಿಶ್ಚಿತಪಡಿಸಿಕೊಳ್ಳತಕ್ಕದ್ದು;

(ಡಿ) ಜಲಸಂರಕ್ಷಣೆ, ಸ್ವಾಭಾವಿಕ ಪರಿಸರದ ಸಂರಕ್ಷಣೆ ಮತ್ತು ಜೈವಿಕವಾಗಿ ವಿಘಟಿಸಬಹುದಾದ ತ್ಯಾಜ್ಯಗಳ ಮರುಬಳಕೆಯ ವಿಷಯಗಳನ್ನು ಕುರಿತು ಅರಿವನ್ನು ಮೂಡಿಸತಕ್ಕದ್ದು;

(ಇ) ಮಹಿಳೆಯರ, ಯುವಜನರ ಮತ್ತು ಹಿರಿಯ ನಾಗರಿಕರ ಸಂಘ ಸಂಸ್ಥೆಗಳೊಂದಿಗೆ ಚರ್ಚಿಸಿ, ಗ್ರಾಮ ಮಟ್ಟದಲ್ಲಿ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ, ಅವರ ವ್ಯಾಪಾರ ವ್ಯವಹಾರಗಳಿಗೆ ಮತ್ತು ವಾಣಿಜ್ಯ ಉದ್ದಿಮೆಗಳಿಗೆ ಉತ್ತೇಜನ ನೀಡುವುದು ಮತ್ತು ಅವರು ಒಳ್ಳೇ ಹಣ ತರುವಂಥ ಉದ್ಯೋಗ ಪಡೆದುಕೊಳ್ಳಲು ತರಬೇತಿ ಮತ್ತು ಕೌಶಲ್ಯಾಭಿವೃದ್ಧಿ ಅವಕಾಶಗಳನ್ನು ಒದಗಿಸತಕ್ಕದ್ದು ಮತ್ತು ಅಂಥ ಕ್ರಮಕ್ಕಾಗಿ ಗ್ರಾಮಪಂಚಾಯತ್‌ಗೆ ಪ್ರಸ್ತಾವಗಳನ್ನು ಸಲ್ಲಿಸತಕ್ಕದ್ದು;

(ಎಫ್) ಗ್ರಾಮ ಪಂಚಾಯತ್ ಪ್ರದೇಶದ ಒಳಗೆ ಇರುವ ಗೋಮಾಳ, ಹುಲ್ಲುಗಾವಲುಗಳು, ಕೆರೆಗಳು, ಕೆರೆ ದಂಡೆಗಳು, ಅಂತರ್ಜಲ, ರಸ್ತೆಗಳು, ಸೇತುವೆಗಳು, ಗಣಿಗಳು ಮುಂತಾದವುಗಳಂತಹ ಸಾರ್ವಜನಿಕ ಸ್ವತ್ತುಗಳನ್ನು ಸಂರಕ್ಷಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು;

(ಜಿ) ಗ್ರಾಮ ಪ್ರದೇಶದಲ್ಲಿ ಜನಪದ ಕಲೆಗಳ, ಕರಕುಶಲ ಕಲೆಗಳ, ಗೃಹ ಕೈಗಾರಿಕೆಗಳ ಮತ್ತು ಗುಡಿ ಕೈಗಾರಿಕೆಗಳ ಪುನರುಜ್ಜೀವನಕ್ಕೆ ಮತ್ತು ಬೆಳವಣಿಗೆಗೆ ಉತ್ತೇಜನ ನೀಡತಕ್ಕದ್ದು;

(ಹೆಚ್) ಗ್ರಾಮದ ನಿವಾಸಿಗಳು ಸುರಕ್ಷತೆಯಿಂದ ಇರುವುದನ್ನು, ಭದ್ರತೆ ಒದಗಿಸಿರುವುದನ್ನು ಮತ್ತು ಸ್ವಾತಂತ್ರ್ಯದಿಂದ ಇರುವುದನ್ನು ಖಾತರಿಪಡಿಸಿಕೊಳ್ಳತಕ್ಕದ್ದು;

(ಐ) ಜನರ ಪರಂಪರೆಗಳನ್ನು ಮತ್ತು ಸಂಪ್ರದಾಯಗಳನ್ನು, ಅವರ ಸಾಂಸ್ಕೃತಿಕ ಅನನ್ಯತೆಯನ್ನು, ಸಮುದಾಯ ಸಂಪನ್ಮೂಲಗಳನ್ನು ಮತ್ತು ವಿವಾದಗಳನ್ನು ಬಗೆಹರಿಸಿಕೊಳ್ಳಲು ಅವರು ಅನುಸರಿಸುತ್ತಿರುವ ಸಾಂಪ್ರದಾಯಿಕ ವಿಧಾನವನ್ನು ಕಾಪಾಡುವುದಕ್ಕೆ ಮತ್ತು ಸಂರಕ್ಷಣೆ ಮಾಡುವುದಕ್ಕೆ ಸಮರ್ಥರಾಗಿರತಕ್ಕದ್ದು;

(ಜೆ) ಜಾತಿ, ಪಂಥ, ಧರ್ಮ ಮತ್ತು ಲಿಂಗ ಇತ್ಯಾದಿ ಆಧಾರದ ಮೇಲೆ ಜನರ ನಡುವಣ ತಾರತಮ್ಯವನ್ನು ತಡೆಗಟ್ಟಲು ಕ್ರಮವನ್ನು ವಹಿಸತಕ್ಕದ್ದು;

(ಕೆ) ಪಂಚಾಯತ್ ಪ್ರದೇಶದಲ್ಲಿ ಅಕ್ರಮವಾಗಿ ಹಣ ಲೇವಾದೇವಿ ನಡೆಸುವ ಚಟುವಟಿಕೆಗಳನ್ನು ತಡೆಯತಕ್ಕದ್ದು ಮತ್ತು ಸಂಬಂಧಪಟ್ಟ ಅಧಿಕಾರಿಗಳು ಅಂಥ ಚಟುವಟಿಕೆ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವ ಸಲುವಾಗಿ ಆ ಅಧಿಕಾರಿಗಳಿಗೆ ವರದಿ ಮಾಡುವುದಕ್ಕೆ ಅನುವಾಗುವಂತೆ ಗ್ರಾಮಪಂಚಾಯತ್‌ಗೆ ಮಾಹಿತಿಯನ್ನು ನೀಡತಕ್ಕದ್ದು.

(5) ಗ್ರಾಮಸಭೆಯು,–

(ಎ) ಆಯವ್ಯಯ ಏರ್ಪಾಟುಗಳನ್ನು, ಯೋಜನಾ ವೆಚ್ಚದ ವಿವರಗಳನ್ನು ಮತ್ತು ಪ್ರತಿಯೊಂದು ಕೆಲಸ ಕಾರ್ಯಕ್ಕೆ ನಿಧಿಗಳ ಹಂಚಿಕೆಯನ್ನು ಮತ್ತು ಗ್ರಾಮ ಪ್ರದೇಶದಲ್ಲಿ ಕಾರ್ಯಗತಗೊಳಿಸಬೇಕೆಂದು ಪ್ರಸ್ತಾಪಿಸಿರುವ ಅಥವಾ ಕಾರ್ಯಗತಗೊಳಿಸಲು ಉದ್ದೇಶಿಸಿರುವ ಕಾಮಗಾರಿಗಳ ಅಂದಾಜಿನ ಮತ್ತು ಸಾಮಗ್ರಿಗಳ ವೆಚ್ಚಗಳ ವಿವರಗಳನ್ನು ಸಹ ಸಿದ್ಧಪಡಿಸಬಹುದು ಮತ್ತು ಪ್ರತಿ ವರ್ಷದ ಅಕ್ಟೋಬರ್ ತಿಂಗಳಿನಲ್ಲಿ ನಡೆಯುವ ಎಲ್ಲಾ ಗ್ರಾಮಸಭಾಗಳ ವಿಶೇಷ ಸಭೆಯಲ್ಲಿ ಅವುಗಳನ್ನು ಚರ್ಚಿಸಬಹುದು ಮತ್ತು ಅನುಮೋದಿಸಬಹುದು;

(ಬಿ) ಹಿಂದಿನ ಆರ್ಥಿಕ ವರ್ಷದ ಲೆಕ್ಕಪತ್ರಗಳ ವಾರ್ಷಿಕ ವರದಿಯನ್ನು, ಕಳೆದ ವರ್ಷದ ಲೆಕ್ಕಪರಿಶೋಧನಾ ವರದಿಯನ್ನು ಮತ್ತು ಅದಕ್ಕೆ ಉತ್ತರಗಳನ್ನು ಮತ್ತು ಪಂಚಾಯತ್ ಜಮಾ–ಬಂದಿ ವರದಿಯನ್ನು ಸಿದ್ಧಪಡಿಸಬಹುದು ಮತ್ತು ಆ ಬಗ್ಗೆ ಕೈಗೊಂಡ ಕ್ರಮವನ್ನು ಪ್ರತಿ ವರ್ಷದ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಎಲ್ಲಾ ಗ್ರಾಮಸಭೆಗಳ ವಿಶೇಷ ಸಭೆಯಲ್ಲಿ ಚರ್ಚಿಸಬಹುದು ಮತ್ತು ಅದನ್ನು ಅನುಮೋದಿಸಬಹುದು.

(6) ಗ್ರಾಮಸಭೆಯು, ಈ ಕೆಳಕಂಡ ಮಾಹಿತಿಯನ್ನು, ಎಂದರೆ:–

(ಎ) ಪಂಚಾಯತ್ ಪ್ರದೇಶಕ್ಕೆ ಸಂಬಂಧಪಟ್ಟ ಗ್ರಾಮ ಪಂಚಾಯತ್‌ವು ಸಕಾರಣ ಇದ್ದೇ ಪ್ರತಿಯೊಂದು ತೀರ್ಮಾನವನ್ನು ತೆಗೆದುಕೊಂಡಿದೆಯೇ ಎಂಬ ಮಾಹಿತಿಯನ್ನು ಗ್ರಾಮ ಪಂಚಾಯತ್‌ನಿಂದ;

(ಬಿ) ಗ್ರಾಮಸಭಾದ ನಿರ್ಣಯಗಳ ಬಗ್ಗೆ ಅನುಸರಣಾ ಕ್ರಮ ಕೈಗೊಳ್ಳಲಾಗಿದೆಯೇ ಎನ್ನುವ ಬಗ್ಗೆ ಮಾಹಿತಿಯನ್ನು ಗ್ರಾಮ ಪಂಚಾಯತ್‌ನಿಂದ; ಮತ್ತು

(ಸಿ) ಗ್ರಾಮಪಂಚಾಯತ್ ಅಧಿಕಾರಿಗಳು ಯಾವ ಯಾವ ಸೇವೆಗಳನ್ನು ಸಲ್ಲಿಸುತ್ತಿದ್ದಾರೆ ಮತ್ತು ಗ್ರಾಮಸಭಾದ ಸಭೆಯ ನಂತರದ ಆರು ತಿಂಗಳುಗಳ ಅವಧಿಯಲ್ಲಿ ಅವರು ಕೈಗೊಳ್ಳಲು ಉದ್ದೇಶಿಸಿರುವ ಕಾರ್ಯಗಳ ಬಗ್ಗೆ ಮಾಹಿತಿಯನ್ನು ಗ್ರಾಮ ಪಂಚಾಯತ್ ಅಧಿಕಾರಿಗಳಿಂದ

– ಕೇಳಬಹುದು ಮತ್ತು ಪಡೆದುಕೊಳ್ಳಬಹುದು.

(7) ಗ್ರಾಮಸಭೆಗಳ ಸಭೆಗಳಲ್ಲಿ ತೆಗೆದುಕೊಂಡ ನಿರ್ಣಯಗಳನ್ನು, ಅಭಿಪ್ರಾಯಗಳನ್ನು, ಶಿಫಾರಸ್ಸುಗಳನ್ನು ಅಥವಾ ಸಲಹೆಗಳನ್ನು ಗ್ರಾಮಸಭಾ ಗೊತ್ತುಪಡಿಸಿದ ಆದ್ಯತೆಗಳನ್ನು ಬದಲಿಸದೆಯೇ, ಲಭ್ಯವಿರುವ ನಿಧಿಗಳಿಗೆ ಒಳಪಟ್ಟು ಮತ್ತು ಸರ್ಕಾರವು ನೀಡಿದ ಮಾರ್ಗದರ್ಶನಗಳಂತೆ ಅನುಷ್ಠಾನಗೊಳಿಸುವುದಕ್ಕಾಗಿ ಗ್ರಾಮ ಪಂಚಾಯತ್ ತಿಳಿಸತಕ್ಕದ್ದು.

**3ಎಫ್. ಗ್ರಾಮಸಭೆಯ ಕರ್ತವ್ಯಗಳು.–** (1) ಗ್ರಾಮ ಸಭೆಯು ಈ ಮುಂದಿನ ಕರ್ತವ್ಯಗಳನ್ನು ಚಲಾಯಿಸತಕ್ಕದ್ದು, ಎಂದರೆ:–

(ಎ) ಎಲ್ಲಾ ವರ್ಗದ ಜನರಿಗೆ ವಿಶೇಷವಾಗಿ ಸುರಕ್ಷಿತವಲ್ಲದವರಿಗೆ ಮತ್ತು ಅಲೆಮಾರಿ ಕಾರ್ಮಿಕರಿಗೆ ಎಲ್ಲಾ ಯೋಜನೆಗಳು ಲಾಭದಾಯಕವೇ ಎಂಬುದನ್ನು ಖಚಿತಪಡಿಸುವುದು;

(ಬಿ) ಪ್ರತಿಯೊಂದು ಜನವಸತಿ ಸಭಾಗಳ ಹಾಗೂ ವಾರ್ಡ್ ಸಭಾಗಳ ಅಗತ್ಯಗಳನ್ನು, ಶಿಫಾರಸ್ಸುಗಳನ್ನು ಮತ್ತು ಸಲಹೆಗಳನ್ನು ಪರ್ಯಾಲೋಚಿಸಿದ ನಂತರ 'ಆದ್ಯತೆ ರ್‍ಯಾಂಕಿಂಗ್' ವಿಧಾನದ ಪ್ರಕಾರ ಪಂಚಾಯತ್ ಪ್ರದೇಶದಲ್ಲಿ ಅನುಷ್ಠಾನಗೊಳಿಸಬೇಕಾದ ಎಲ್ಲಾ ಯೋಜನೆಗಳ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳ ಆದ್ಯತೆಯನ್ನು ನಿರ್ಧರಿಸಿಕೊಂಡು ಕ್ರೋಢೀಕೃತ ಪ್ರಸ್ತಾವನೆಗಳನ್ನು ಸಿದ್ಧಪಡಿಸುವುದು;

(ಸಿ) ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿ ಅಥವಾ ಸರ್ಕಾರವು ನಿಗದಿಪಡಿಸಿದ ಮಾನದಂಡದ ಆಧಾರದ ಮೇಲೆ ಫಲಾನುಭವಿ ಉದ್ದೇಶಿತ ಸ್ಕೀಮುಗಳ ಅಡಿಯಲ್ಲಿ ಪಂಚಾಯತ್ ಪ್ರದೇಶದಿಂದ ಅತಿ ಅರ್ಹ ವ್ಯಕ್ತಿಗಳನ್ನು ಗುರುತಿಸುವುದು ಮತ್ತು ಆಯ್ಕೆ ಮಾಡುವುದು ಮತ್ತು ಜನವಸತಿ ಸಭಾಗಳು ಮತ್ತು ವಾರ್ಡ್ ಸಭಾಗಳ ಅಗತ್ಯತೆಗಳು, ಶಿಫಾರಸುಗಳು ಮತ್ತು ಸಲಹೆಗಳನ್ನು ಪರಿಗಣಿಸಿದ ತರುವಾಯ 'ಆದ್ಯತಾ ಶ್ರೇಣಿಯ' ಅನ್ವಯ ಆದ್ಯತೆಯ ಆಧಾರದಲ್ಲಿ ಫಲಾನುಭವಿಗಳ ಪಟ್ಟಿಯನ್ನು ಸಿದ್ದಪಡಿಸುವುದು ಮತ್ತು ಜನವಸತಿ ಮತ್ತು ವಾರ್ಡ್ ಸಭಾಗಳು ಕಳುಹಿಸಿದ ಆದ್ಯತೆ ಕ್ರಮದಲ್ಲಿ ತನ್ನ ಅಭಿವೃದ್ಧಿ ಯೋಜನೆಯಲ್ಲಿ ಸೇರಿಸುವುದಕ್ಕೆ ಗ್ರಾಮಪಂಚಾಯತಿಗೆ ಅದನ್ನು ಕಳುಹಿಸತಕ್ಕದ್ದು.

(ಡಿ) ನಿಧಿಗಳ ಲಭ್ಯತೆಗೆ ಒಳಪಟ್ಟು, ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಯೋಜನೆಗಳು, ಕಾರ್ಯಕ್ರಮಗಳು ಮತ್ತು ಪ್ರಾಜೆಕ್ಟ್‌ಗಳನ್ನು ಜನವಸತಿ ಸಭಾಗಳ ಮತ್ತು ವಾರ್ಡ್ ಸಭಾಗಳ ಅಗತ್ಯಗಳನ್ನು ಮತ್ತು ಸಲಹೆಗಳನ್ನು ಪರಿಗಣಿಸಿದ ತರುವಾಯ, ಗ್ರಾಮ ಪಂಚಾಯತಿಯು ಅನುಷ್ಠಾನಕ್ಕಾಗಿ ತೆಗೆದುಕೊಳ್ಳುವ ಮೊದಲು ಅಂಥ ಯೋಜನೆಗಳು, ಕಾರ್ಯಕ್ರಮಗಳು ಮತ್ತು ಪ್ರಾಜೆಕ್ಟ್ ಗಳನ್ನು ಅನುಮೋದಿಸುವುದು;

(ಇ) ಪಂಚಾಯತ್ ಪ್ರದೇಶದಲ್ಲಿ ನೈರ್ಮಲ್ಯೀಕರಣ ವ್ಯವಸ್ಥೆಗಳನ್ನು ಒದಗಿಸುವಲ್ಲಿ ಗ್ರಾಮ ಪಂಚಾಯತ್‌ನ ಕಾರ್ಯನಿರ್ವಾಹಕ ಸಿಬ್ಬಂದಿಗೆ ನೆರವಾಗುವುದು ಮತ್ತು ಗ್ರಾಮದ ಪ್ರದೇಶದಲ್ಲಿ ಬಯಲು ಬಹಿರ್ದೆಸೆ ಮುಕ್ತ ಸ್ವಚ್ಛ ಮತ್ತು ಆರೋಗ್ಯಕರ ಪರಿಸರವನ್ನು ಸೃಜಿಸಲು ಮತ್ತು ಕಸಕಡ್ಡಿಗಳನ್ನು ತೆಗೆದುಹಾಕುವುದಕ್ಕೆ ಸ್ವಯಂಸೇವೆಯನ್ನು ಸಜ್ಜುಗೊಳಿಸುವುದು;

(ಎಫ್) ಗ್ರಾಮ ಸಭಾ ಸದಸ್ಯರುಗಳಿಗೆ ತೆರಿಗೆಯನ್ನು ಮತ್ತು ಇತರ ಬಾಕಿಗಳನ್ನು ಪಾವತಿಸುವುದಕ್ಕೆ ಮತ್ತು ಸಾಲಗಳನ್ನು ಮರುಪಾವತಿಸುವುದಕ್ಕೆ ಮನವೊಲಿಸುವುದು;

(ಜಿ) ನೀರಿನ ಸಂರಕ್ಷಣೆ, ನೈಸರ್ಗಿಕ ಪರಿಸರದ ಸಂರಕ್ಷಣೆ ಮತ್ತು ಜೈವಿಕ ವಿಘಟಕ ತ್ಯಾಜ್ಯಗಳ ಮರುಬಳಕೆಯ ವಿಷಯಗಳನ್ನು ಕುರಿತು ಅರಿವನ್ನು ಮೂಡಿಸತಕ್ಕದ್ದು;

(ಹೆಚ್) ಗ್ರಾಮ ಪಂಚಾಯತ್ ಪ್ರದೇಶದ ಒಳಗೆ ಇರುವ ಗೋಮಾಳ, ಹುಲ್ಲುಗಾವಲುಗಳು, ಕೆರೆಗಳು, ಕೆರೆ ಅಚ್ಚುಕಟ್ಟು ಪ್ರದೇಶ, ಅಂತರ್ಜಲ, ರಸ್ತೆಗಳು, ಸೇತುವೆಗಳು, ಗಣಿಗಳು ಮುಂತಾದವುಗಳಂತಹ ಸಾರ್ವಜನಿಕ ಸ್ವತ್ತುಗಳನ್ನು ಸಂರಕ್ಷಿಸತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು;

(ಐ) ಗ್ರಾಮದ ನಿವಾಸಿಗಳು ಸುರಕ್ಷತೆಯಿಂದ ಇರುವುದನ್ನು, ಭದ್ರತೆ ಒದಗಿಸಿರುವುದನ್ನು ಮತ್ತು ಸ್ವಾತಂತ್ರ್ಯದಿಂದ ಇರುವುದನ್ನು ಖಾತರಿಪಡಿಸಿಕೊಳ್ಳತಕ್ಕದ್ದು;

(ಜೆ) ಪಂಚಾಯತ್ ಪ್ರದೇಶದಲ್ಲಿ ಅಕ್ರಮವಾಗಿ ಹಣ ಲೇವಾದೇವಿ ನಡೆಸುವ ಚಟುವಟಿಕೆಗಳನ್ನು ಸಂಬಂಧಪಟ್ಟ ಪ್ರಾಧಿಕಾರಿಗಳಿಗೆ ವರದಿ ಮಾಡತಕ್ಕದ್ದು ಮತ್ತು ಅದರ ವಿರುದ್ಧ ಕ್ರಮ ಕೈಗೊಳ್ಳುವ ಸಲುವಾಗಿ ಗ್ರಾಮಪಂಚಾಯತ್‌ಗೆ ಮಾಹಿತಿಯನ್ನು ನೀಡತಕ್ಕದ್ದು.

**3ಜಿ. ಗ್ರಾಮಸಭಾದ ಸಭೆಗಳು.–** (1) ಗ್ರಾಮಪಂಚಾಯತ್‌ನ ಅಧ್ಯಕ್ಷನು ಎಲ್ಲಾ ಗ್ರಾಮಸಭಾಗಳ ಮೊದಲ ಸಭೆಯನ್ನು ಸಾಧ್ಯವಾಗಬಹುದಾದಷ್ಟು ಅರವತ್ತು ದಿನಗಳ ಒಳಗೆ ಕರೆಯತಕ್ಕದ್ದು ಮತ್ತು ತದನಂತರ ಸಭೆಯನ್ನು ಗ್ರಾಮಸಭೆಯು ನಿರ್ಧರಿಸಿದಂಥ ದಿನಾಂಕದಂದು ಕರೆಯತಕ್ಕದ್ದು. ಆದರೆ ಇಂಥ ಎರಡು ಸಭೆಗಳ ನಡುವಿನ ಅಂತರವು ಆರು ತಿಂಗಳುಗಳಿಗೆ ಮೀರದಂತೆ ಇರತಕ್ಕದ್ದು. ಗ್ರಾಮಸಭಾದ ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ಆಯಾ ಗ್ರಾಮಪಂಚಾಯತ್ ಅಧ್ಯಕ್ಷರು ವಹಿಸತಕ್ಕದ್ದು ಮತ್ತು ಆತನ/ಆಕೆಯ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷರು ಅಧ್ಯಕ್ಷತೆ ವಹಿಸಿಕೊಳ್ಳತಕ್ಕದ್ದು ಮತ್ತು ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಇಬ್ಬರ ಅನುಪಸ್ಥಿತಿಯಲ್ಲಿ ಸಭೆಯಲ್ಲಿ ಹಾಜರಿರುವ ಸದಸ್ಯರು ತಮ್ಮಲ್ಲೇ ಆಯ್ಕೆ ಮಾಡಿಕೊಂಡ ಯಾರೇ ಇತರ ಸದಸ್ಯರು ಅಧ್ಯಕ್ಷತೆ ವಹಿಸತಕ್ಕದ್ದು. ಸಭೆಯನ್ನು ಕರೆಯಬೇಕಾದ ಅಥವಾ ಅವಶ್ಯವಿದ್ದಾಗ ಗ್ರಾಮ ಪಂಚಾಯತಿಯ ಅಧ್ಯಕ್ಷನು ಸಭೆಯನ್ನು ಕರೆಯಲು ವಿಫಲನಾದರೆ ಕಾರ್ಯನಿರ್ವಹಣಾ ಅಧಿಕಾರಿಯು ಅಂಥ ಸಭೆಯನ್ನು ಕರೆಯತಕ್ಕದ್ದು. ಅಂಥ ಅಧ್ಯಕ್ಷನು ಒಂದು ಸಾವಿರ ರೂಪಾಯಿಗಳನ್ನು ಗ್ರಾಮ

ಪಂಚಾಯತಿ ನಿಧಿಗೆ ಸಂದಾಯ ಮಾಡಲು ಹೊಣೆಗಾರನಾಗಿರತಕ್ಕದ್ದು ಮತ್ತು ಸಭೆಯನ್ನು ಕರೆಯಲು ವಿಫಲನಾಗಲು ಇರುವ ಕಾರಣಗಳನ್ನು ಗ್ರಾಮಸಭೆಯ ಮುಂದಿನ ಸಭೆಯಲ್ಲಿ ತಿಳಿಸತಕ್ಕದ್ದು.

(2) ಸಭೆಗಳ ನೋಟೀಸುಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಪ್ರದರ್ಶಿಸತಕ್ಕದ್ದು ಮತ್ತು ಎಲ್ಲಾ ಸದಸ್ಯರು ಅಂತಹ ಸಭೆಗಳ ಬಗ್ಗೆ ತಿಳಿದುಕೊಳ್ಳುವ ಹಾಗೆ ಮತ್ತು ದೂರದರ್ಶನದ ಪ್ರಾದೇಶಿಕ ಚಾನಲ್‌ಗಳಲ್ಲಿ, ರೇಡಿಯೋ ಹಾಗೂ ವಾರ್ತಾ ಪತ್ರಿಕೆಗಳಂತಹ ಇತರ ಮಾಧ್ಯಮಗಳಲ್ಲಿ ಪ್ರಸಾರದ ಮೂಲಕ ಹಾಗೂ ಕರಪತ್ರಗಳಲ್ಲಿ ಮುದ್ರಿಸಿ ಗ್ರಾಮಪಂಚಾಯತಿ ಪ್ರದೇಶದಲ್ಲಿ ವಿತರಿಸತಕ್ಕದ್ದು.

(3) ಗ್ರಾಮಸಭಾದ ಸಾಮಾನ್ಯ ಸಭೆಗೆ ಕೋರಂ, ಗ್ರಾಮಸಭಾದಲ್ಲಿರುವ ಮತದಾರರ ಒಟ್ಟು ಸಂಖ್ಯೆಯ ಹತ್ತನೇ ಒಂದು ಭಾಗದಷ್ಟು ಮತದಾರರು ಅಥವಾ ಒಂದುನೂರು ಸದಸ್ಯರು, ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟಕ್ಕಿಂತ ಕಡಿಮೆ ಇರತಕ್ಕದ್ದಲ್ಲ:

ಪರಂತು, ಸಭೆಗೆ ನಿಗದಿಪಡಿಸಿದ ಸಮಯದಲ್ಲಿ ಕೋರಂ ಇಲ್ಲದಿದ್ದರೆ, ಪೀಠಾಸೀನ ವ್ಯಕ್ತಿಯು ಮೂವತ್ತು ನಿಮಿಷಗಳವರೆಗೆ ಕಾಯತಕ್ಕದ್ದು ಮತ್ತು ತದನಂತರವೂ ಕೋರಂ ಇಲ್ಲದಿದ್ದರೆ, ಪೀಠಾಸೀನ ವ್ಯಕ್ತಿಯು ಸಾರ್ವಜನಿಕ ರಜಾದಿನ ಅಲ್ಲದ ಮುಂದಿನ ದಿನಕ್ಕೆ ಅಥವಾ ಯಾವುದೇ ಇತರ ದಿನಕ್ಕೆ ಸಭೆಯನ್ನು ಮುಂದೂಡತಕ್ಕದ್ದು, ಅಂತಹ ಮುಂದೂಡಲ್ಪಟ್ಟ ಸಭೆಗೆ ಕೋರಂನ ಅಗತ್ಯ ಇರತಕ್ಕದ್ದಲ್ಲ.

(4) ಪಂಚಾಯತ್ ಪ್ರದೇಶದೊಳಗೆ ಇರುವ ಪ್ರತಿಯೊಂದು ವಾರ್ಡ್ ಸಭಾದಿಂದ ಕಡೇಪಕ್ಷ ಹತ್ತು ಮಂದಿ ಸದಸ್ಯರು ಸಭೆಯಲ್ಲಿ ಹಾಜರಿರತಕ್ಕದ್ದು ಮತ್ತು ಸಭೆಯಲ್ಲಿ ಹಾಜರಿದ್ದ ಸದಸ್ಯರಲ್ಲಿ ಶೇಕಡ ಮೂವತ್ತಕ್ಕಿಂತ ಕಡಿಮೆಯಿಲ್ಲದಂತೆ ಮಹಿಳೆಯರು ಇರತಕ್ಕದ್ದು ಮತ್ತು ವಾರ್ಡ್‌ಸಭಾದಲ್ಲಿ ಅನುಸೂಚಿತ ಜಾತಿಯ ಮತ್ತು ಅನುಸೂಚಿತ ಪಂಗಡದ ವ್ಯಕ್ತಿಗಳು ಅವರವರ ಜನಸಂಖ್ಯೆಯ ಪ್ರಮಾಣಕ್ಕೆ ಅನುಗುಣವಾಗಿ ಇರತಕ್ಕದ್ದು.

(5) ಆ ಪ್ರದೇಶದಿಂದ ಚುನಾಯಿತರಾಗಿರುವ ಸದಸ್ಯರು ಪ್ರತಿಯೊಂದು ಗ್ರಾಮಸಭಾದ ಸಭೆಯಲ್ಲಿ ಹಾಜರಿರತಕ್ಕದ್ದು.

(6) ಗ್ರಾಮಪಂಚಾಯತ್‌ನ ಅಧಿಕಾರಿಗಳು, ಅಧ್ಯಕ್ಷರು ಅಗತ್ಯಪಡಿಸಿದರೆ ಗ್ರಾಮಸಭೆಯ ಸಭೆಗಳಲ್ಲಿ ಭಾಗವಹಿಸತಕ್ಕದ್ದು ಮತ್ತು ಸಭೆಯ ಸಂಚಾಲಕ ಎಂದು ನಿರ್ದಿಷ್ಟವಾಗಿ ಗೊತ್ತುಪಡಿಸಿದ ಪಂಚಾಯತಿಯ ಅಂಥ ಅಧಿಕಾರಿಯು ಸಭೆಯನ್ನು ಕರೆಯಲು ಮತ್ತು ನಡೆಸಲು ಮತ್ತು ಸಭೆಯ ನಡವಳಿಗಳನ್ನು ಟಿಪ್ಪಣಿ ಪುಸ್ತಕದಲ್ಲಿ ದಾಖಲು ಮಾಡಲು ಹಾಗೂ ಅವುಗಳನ್ನು ವಿಡಿಯೋ ಚಿತ್ರೀಕರಣ ಮಾಡುವುದಕ್ಕೆ ನೆರವಾಗತಕ್ಕದ್ದು ಮತ್ತು ಸಭೆಯ ಎಲ್ಲಾ ನಿರ್ಣಯಗಳನ್ನು ದಾಖಲು ಮಾಡತಕ್ಕದ್ದು ಹಾಗೂ ಅವುಗಳನ್ನು ಅಧ್ಯಕ್ಷರು ಪ್ರಮಾಣೀಕರಿಸತಕ್ಕದ್ದು:

ಪರಂತು, ಜನವಸತಿ ಸಭಾ ಮತ್ತು ವಾರ್ಡ್ ಸಭಾದ ಸಭೆಗಳಲ್ಲಿ ವಿತರಿಸಲಾದ ಅಗತ್ಯತೆಗಳನ್ನು ಗ್ರಾಮಸಭಾದ ಸಭೆಯಲ್ಲಿ ಕೈಗೆತ್ತಿಕೊಳ್ಳತಕ್ಕದ್ದು ಮತ್ತು ತನ್ನ ಸ್ವಂತದ್ದೆಂದು ದಾಖಲಿಸಿ ಅದರ ಮುಂದೆ ಇಡುವುದು.

(7) ಗ್ರಾಮಸಭಾದ ಸಭೆಗಳಲ್ಲಿ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಮಂಡನೆ ಆದ ಎಲ್ಲಾ ನಿರ್ಣಯಗಳನ್ನು ಹಾಜರಿರುವ ಸದಸ್ಯರ ಬಹುಮತದ ಮತ್ತು ಮತದಾನದ ಮೂಲಕ ಅಂಗೀಕರಿಸತಕ್ಕದ್ದು ಮತ್ತು ಗ್ರಾಮಪಂಚಾಯತಿಯು, ಗ್ರಾಮಸಭೆಯ ಅಂತಹ ನಿರ್ಣಯಗಳನ್ನು ಅವು ತನ್ನದೇ ಆದ ನಿರ್ಣಯಗಳಾಗಿದ್ದರೆ ಹೇಗೋ ಹಾಗೆ ಅವುಗಳನ್ನು ಅಳವಡಿಸಿಕೊಳ್ಳತಕ್ಕದ್ದು ಮತ್ತು ಗ್ರಾಮಸಭಾವು ತಿಳಿಸಿದ ಆದ್ಯತೆಯ ಕ್ರಮದಲ್ಲಿ ಅವುಗಳನ್ನು ಅನುಷ್ಠಾನಗೊಳಿಸತಕ್ಕದ್ದು.

(8) ಗ್ರಾಮಸಭಾದ ಎಲ್ಲಾ ಸಭೆಗಳಲ್ಲಿ ಎಲ್ಲಾ ನಾಗರಿಕರೂ ಅದರಲ್ಲೂ ಮುಖ್ಯವಾಗಿ ಸಮಾಜದ ಸುರಕ್ಷಿತವಲ್ಲದ ವರ್ಗಗಳ ಜನರು ಸಕ್ರಿಯ ಪಾಲ್ಗೊಳ್ಳುವಿಕೆಯ ಜೊತೆ ಎಲ್ಲ ಸಭೆಗಳೂ ಮುಕ್ತ ಮತ್ತು ಪಾರದರ್ಶಕವಾಗಿ ನಡೆಯತಕ್ಕದ್ದು.

(9) ಗ್ರಾಮಸಭೆಯ ಸಭೆಗಳನ್ನು ಕರೆಯುವುದು ಮತ್ತು ನಡೆಸುವ ಪ್ರಕ್ರಿಯೆಯು ನಿಯಮಿಸಬಹುದಾದಂತೆ ಇರತಕ್ಕದ್ದು.

**3ಹೆಚ್. ಗ್ರಾಮಸಭಾದ ವಿಶೇಷ ಸಭೆ.–** (1) 3ಜಿ ನೇ ಉಪಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ, ಗ್ರಾಮಸಭಾದ ವ್ಯಾಪ್ತಿಯೊಳಗೆ ಇರುವ ಮಹಿಳೆಯರ, ಅನುಸೂಚಿತ ಜಾತಿಯ ಮತ್ತು ಅನುಸೂಚಿತ ಪಂಗಡಗಳ, ರೈತಾಪಿ ಜನರ ಮತ್ತು ಕರಕುಶಲ ಕೆಲಸಗಾರರ, ಯುವಜನರ ಮತ್ತು ಹಿರಿಯ ನಾಗರೀಕರ ಗುಂಪುಗಳು ತಮಗೆ ಅನುಕೂಲವಾದಾಗಲೆಲ್ಲ ಸಭೆಗಳನ್ನು ನಡೆಸಲು ಮುಂದಾಗುವುದಕ್ಕೆ ಹಾಗೂ ಅಭಿವೃದ್ಧಿಗಾಗಿ ತಮ್ಮ ತಮ್ಮ ಪರಿಹಾರಕ್ಕಾಗಿ ಸಲಹೆಗಳ ಸಹಿತ ಗುಂಪಿನ ಅಗತ್ಯತೆಗಳ ರೂಪುರೇಷೆಯನ್ನು ಗ್ರಾಮಸಭೆಯ ನಿಯತ ಸಭೆಗಳಲ್ಲಿ ಸಭೆಯ ಮುಂದಿಡುವುದನ್ನು ತಡೆಯುತ್ತದೆಂದು ಅರ್ಥೈಸತಕ್ಕದ್ದಲ್ಲ:

ಪರಂತು, ಜನವಸತಿ ಸಭಾ ಮತ್ತು ವಾರ್ಡ್ ಸಭಾದ ಸಭೆಗಳಲ್ಲಿ ವಿತರಿಸಲಾದ ಅಗತ್ಯತೆಗಳನ್ನು ಗ್ರಾಮಸಭಾದ ಸಭೆಯಲ್ಲಿ ಕೈಗೆತ್ತಿಕೊಳ್ಳತಕ್ಕದ್ದು ಮತ್ತು ತನ್ನ ಸ್ವಂತದ್ದೆಂದು ದಾಖಲಿಸಿ ಗ್ರಾಮಪಂಚಾಯತಿಯ ಮುಂದೆ ಇಡುವುದು.

ಮತ್ತು ಪರಂತು, ಅಂತಹ ಪ್ರತಿಯೊಂದು ಪ್ರಾತಿನಿಧಿಕ ಗುಂಪು ತನ್ನ ಸಭೆಯಲ್ಲಿ ಸಿದ್ಧಪಡಿಸಿದ ಅಗತ್ಯತೆಗಳ ರೂಪುರೇಷೆಗಳನ್ನು ಗ್ರಾಮಸಭೆಯು ಪರಿಶೀಲಿಸತಕ್ಕದ್ದು ಮತ್ತು ಅದು ತನ್ನದೇ ವಿಷಯ ಎಂಬಂತೆ ಭಾವಿಸಿ ಗ್ರಾಮಪಂಚಾಯತಿಯ ಮುಂದೆ ಮಂಡಿಸಿ ಅನುಸರಣಾ ಕ್ರಮ ಕೈಗೊಳ್ಳತಕ್ಕದ್ದು.

(2) ಈ ಪ್ರಕರಣದ ಇತರ ಉಪಬಂಧಗಳಲ್ಲಿ ಒಳಗೊಂಡಿರುವ ಯಾವುದಕ್ಕೂ ಬಾಧಕವಾಗದಂತೆ ಅಧ್ಯಕ್ಷನು,–

(i) ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ, ಮಹಿಳೆಯರ ಮತ್ತು ಮಕ್ಕಳ ಸಬಲೀಕರಣಕ್ಕಾಗಿ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ರೂಪಿಸುವುದಕ್ಕಾಗಿ ಪ್ರತ್ಯೇಕವಾಗಿ ಗ್ರಾಮಸಭಾದ ಸಭೆಗಳನ್ನು ಗ್ರಾಮಪಂಚಾಯತ್ ಸಭೆಗಳು ನಡೆಯುವುದಕ್ಕೂ ಮೊದಲು ಕಡೆಯಪಕ್ಷ ವರ್ಷಕ್ಕೆ ಒಂದು ಬಾರಿಯಾದರೂ ಅವರವರುಗಳಿಗೆ ಪ್ರತ್ಯೇಕವಾಗಿ ಸಂಬಂಧಿಸಿದ ವಿಷಯಗಳ ಬಗ್ಗೆ ಚರ್ಚೆ ನಡೆಸಲು ಕರೆಯತಕ್ಕದ್ದು;

(ii) ಗ್ರಾಮಸಭಾದ ಸದಸ್ಯರ ಶೇಕಡಾ ಹತ್ತಕ್ಕಿಂತ ಕಡಿಮೆಯಿಲ್ಲದ ಸದಸ್ಯರು, ಚರ್ಚೆಗಾಗಿ ವಿಷಯವನ್ನು ನಿರ್ದಿಷ್ಟಪಡಿಸಿ ಮನವಿ ಮಾಡಿಕೊಂಡಾಗ ಗ್ರಾಮಸಭಾದ ವಿಶೇಷ ಸಭೆಗಳನ್ನು ಕರೆಯತಕ್ಕದ್ದು. ಆದಾಗ್ಯೂ, ಅಂಥ ಯಾವುದೇ ಎರಡು ವಿಶೇಷ ಸಭೆಗಳ ನಡುವೆ ಕಡೆಯಪಕ್ಷ ಮೂರು ತಿಂಗಳುಗಳ ಅಂತರ ಇರತಕ್ಕದ್ದು.

(iii)ಗ್ರಾಮಪಂಚಾಯತ್‌ನ ಯೋಜನೆಗಳನ್ನು ಮತ್ತು ಹಣಕಾಸು ವಿಷಯಗಳನ್ನು ಪರಿಶೀಲಿಸಲು ವರ್ಷದಲ್ಲಿ ಎರಡು ಬಾರಿ ಎಂದರೆ ಏಪ್ರಿಲ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಎಲ್ಲಾ ಗ್ರಾಮಸಭಾಗಳ ವಿಶೇಷ ಆಯವ್ಯಯ ಸಭೆಗಳನ್ನು ಕರೆಯತಕ್ಕದ್ದು.

(3) ಆಯಾ ಗ್ರಾಮಪಂಚಾಯತ್‌ನಲ್ಲಿ ಇರುವ ಅನುಸೂಚಿತ ಜಾತಿ/ಅನುಸೂಚಿತ ಪಂಗಡಗಳ ಜನಸಂಖ್ಯೆಯ ಪ್ರಮಾಣಾನುಸಾರವಾಗಿ ಆಯವ್ಯಯವನ್ನು ಹಂಚಿಕೆ ಮಾಡತಕ್ಕದ್ದು ಮತ್ತು ಗ್ರಾಮಸಭಾದ ವಿಶೇಷ ಸಭೆಯಲ್ಲಿ ಅದನ್ನು ನಿರ್ಧರಿಸತಕ್ಕದ್ದು:

ಪರಂತು, ಆ ಗ್ರಾಮಸಭೆಯು ಈ ನಿಧಿಯನ್ನು ಬಳಕೆ ಮಾಡಿರದಿದ್ದರೆ, ಈ ನಿಧಿಯನ್ನು ಕರ್ನಾಟಕ ಅನುಸೂಚಿತ ಜಾತಿಗಳ ಉಪ-ಯೋಜನೆ ಮತ್ತು ಅನುಸೂಚಿತ ಪಂಗಡಗಳ ಉಪ-ಯೋಜನೆ (ಯೋಜನೆ, ಹಂಚಿಕೆ ಮತ್ತು ಹಣಕಾಸು ಸಂಪನ್ಮೂಲಗಳ ಬಳಕೆ) ಅಧಿನಿಯಮ, 2013ರಲ್ಲಿ (2013ರ ಕರ್ನಾಟಕ ಅಧಿನಿಯಮ ಸಂಖ್ಯೆ 65) ಹೇಳಿರುವುದಕ್ಕೆ ಅನುಸಾರವಾಗಿ ಬಳಕೆ ಮಾಡಿಕೊಳ್ಳತಕ್ಕದ್ದು.

**8. 12ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 12ನೇ ಪ್ರಕರಣದಲ್ಲಿ,–

(ಎ) (ಕೆ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎಲ್) ಸದಸ್ಯನು ತನ್ನ ಸದಸ್ಯತ್ವದ ಅವಧಿಯಲ್ಲಿ ಪಂಚಾಯತ್‌ನ ನಿಧಿಯ ಅಥವಾ ಇತರ ಆಸ್ತಿಗಳ ದುರುಪಯೋಗ ಅಥವಾ ಪಂಚಾಯತ್‌ನ ಯಾವುದೇ ಕಾರ್ಯಕ್ರಮವನ್ನು, ಯೋಜನೆಯನ್ನು ಅಥವಾ ಪ್ರಾಜೆಕ್ಟನ್ನು ಜಾರಿಗೊಳಿಸುವಾಗ ಪಂಚಾಯತ್ ಸದಸ್ಯನಾಗಿ ಅವನು ತನ್ನ ಅಧಿಕಾರವನ್ನು ಅಥವಾ ಪ್ರಾಧಿಕಾರವನ್ನು ದುರುಪಯೋಗ ಅಥವಾ ದುರ್ಬಳಕೆ ಮಾಡಿಕೊಳ್ಳುವ ಯಾವುದೇ ಕೃತ್ಯದಲ್ಲಿ ಪ್ರತ್ಯಕ್ಷವಾಗಿ ಭಾಗಿಯಾಗಿರುವ ತಪ್ಪಿತಸ್ಥನೆಂದು ಕಂಡುಬಂದರೆ."

(ಬಿ) ಪರಂತುಕದಲ್ಲಿ, (ಬಿ) ಮತ್ತು (ಸಿ) ಖಂಡಗಳಲ್ಲಿ "ಐದು ವರ್ಷ" ಎಂಬ ಪದಗಳಿಗೆ "ಆರು ವರ್ಷ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**9. 15ರಿಂದ 23ರವರೆಗಿನ ಪ್ರಕರಣಗಳ ತಿದ್ದುಪಡಿ.–** ಮೂಲ ಅಧಿನಿಯಮದ 15ರಿಂದ 23ರವರೆಗಿನ ಪ್ರಕರಣಗಳಲ್ಲಿ, "ಸಿವಿಲ್ ನ್ಯಾಯಾಧೀಶ (ಕಿರಿಯ ವರ್ಗ)" ಎಂಬ ಪದಗಳು ಬರುವ ಕಡೆಗಳಲೆಲ್ಲ, "ಗೊತ್ತುಪಡಿಸಿದ ನ್ಯಾಯಾಲಯ" ಎಂಬ ಪದಗಳನ್ನು ಪ್ರತ್ಯಯಗಳೊಂದಿಗೆ ಪ್ರತಿಯೋಜಿಸತಕ್ಕದ್ದು.

**10. 22ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 22ನೇ ಪ್ರಕರಣದ (ಐ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(iಎ) ಚುನಾವಣೆ ಸಂದರ್ಭದಲ್ಲಿ ಪರಿಗಣನೆಗಾಗಿ ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಪಂಚಾಯತಿಯ ಸದಸ್ಯ ಅಥವಾ ಅಧ್ಯಕ್ಷ ಅಥವಾ ಉಪಾಧ್ಯಕ್ಷರ ಹುದ್ದೆಯ ವ್ಯಾಪಾರಕ್ಕೆ ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಪಂಚಾಯತಿಯ ಯಾವುದೇ ಮತದಾರ ಅಥವಾ ಸದಸ್ಯನನ್ನು ಸೆಳೆಯುವುದು ಅಥವಾ ದಬ್ಬಾಳಿಕೆ ಅಥವಾ ವಂಚನೆ ಮಾಡುವುದು;"

**11. 24ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 24ನೇ ಪ್ರಕರಣದಲ್ಲಿ,–

(i) 'ಸಿವಿಲ್ ನ್ಯಾಯಾಧೀಶರು (ಕಿರಿಯ ವರ್ಗ)' ಎಂಬ ಪದಗಳಿಗೆ "ಗೊತ್ತುಪಡಿಸಿದ ನ್ಯಾಯಾಲಯ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) 'ಡೆಪ್ಯುಟಿ ಕಮಿಷನರಿಗೆ" ಎಂಬ ಪದಗಳಿಗೆ "ರಾಜ್ಯ ಚುನಾವಣಾ ಆಯುಕ್ತರು ಮತ್ತು ಸಂಬಂಧಪಟ್ಟ ಪಂಚಾಯತ್‌ಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

**12. 24ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 24ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"24ಎ ಬಾಕಿ ಪ್ರಕರಣಗಳ ವರ್ಗಾವಣೆ.–** ಕರ್ನಾಟಕ ಪಂಚಾಯತ್ ರಾಜ್ (ಎರಡನೇ ತಿದ್ದುಪಡಿ) ಅಧಿನಿಯಮ, 2015ರ ಪ್ರಾರಂಭದ ದಿನಾಂಕಕ್ಕೆ ಮೊದಲು ಚುನಾವಣೆ ವಿವಾದಗಳಿಗೆ ಸಂಬಂಧಿಸಿದಂತೆ ಸಿವಿಲ್ ಜಡ್ಜ್(ಕಿರಿಯ ವಿಭಾಗ) ಮತ್ತು ಸಿವಿಲ್ ಜಡ್ಜ್(ಹಿರಿಯ ವಿಭಾಗ) ಈಗ ಕರೆಯಲಾಗಿರುವಂತೆ ಸಿವಿಲ್ ಜಡ್ಜ್ ರವರ ನ್ಯಾಯಾಲಯ ಅಥವಾ ಹಿರಿಯ ಸಿವಿಲ್ ಜಡ್ಜ್‌ರವರ ನ್ಯಾಯಾಲಯಗಳಲ್ಲಿ ಬಾಕಿ ಇರುವ ಎಲ್ಲಾ ಪ್ರಕರಣಗಳನ್ನು ಸಂಬಂಧಿಸಿದ ಗೊತ್ತುಪಡಿಸಿದ ನ್ಯಾಯಾಲಯಕ್ಕೆ ವರ್ಗಾಯಿಸತಕ್ಕದ್ದು ಮತ್ತು ಅವುಗಳನ್ನು ಅದರಲ್ಲಿಯೇ ಬಾಕಿ ಇರುವುದಾಗಿ ವಿಲೇ ಮಾಡತಕ್ಕದ್ದು."

**13. 43ಎ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 43ಎ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"43ಎ. ಸದಸ್ಯರನ್ನು ತೆಗೆದುಹಾಕುವುದು.–** (1) ಸರ್ಕಾರವು, ಗ್ರಾಮಪಂಚಾಯತ್‌ನ ಶಿಫಾರಸ್ಸಿನಂತೆ ಅಥವಾ ಅನ್ಯಥಾ ಯಾವೊಬ್ಬ ಸದಸ್ಯನನ್ನು,–

(i) ಆತನು ತನ್ನ ಕರ್ತವ್ಯಗಳನ್ನು ನಿರ್ವಹಿಸುವಾಗ ದುರ್ನಡತೆಯ ಅಥವಾ ತಲೆ ತಗ್ಗಿಸುವಂಥ ನಡತೆಯ ತಪ್ಪಿತಸ್ಥನಾಗಿದ್ದಾನೆಂದು,

(ii) (ಎ) ಜಿಲ್ಲಾ ವೈದ್ಯಾಧಿಕಾರಿಯು ಪ್ರಮಾಣೀಕರಿಸಬಹುದಾದಂತೆ ಆ ಹುದ್ದೆಯನ್ನು ಹೊಂದಲು ವೈದ್ಯಕೀಯವಾಗಿ ಅಸಮರ್ಥನಾದ ಸಂದರ್ಭದಲ್ಲಿ,

(ಬಿ) ದಿವಾಳಿ ಅಥವಾ ಅಸ್ವಸ್ಥಚಿತ್ತದವನಾದ ಸಂದರ್ಭದಲ್ಲಿ,

– ಸದಸ್ಯರಾಗಿ ತಮ್ಮ ಕರ್ತವ್ಯ ನಿರ್ವಹಿಸಲು ಅಸಮರ್ಥರಾಗಿರುವರೆಂದು ಅಥವಾ ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಅಸಡ್ಡೆ ಉಳ್ಳವರಾಗಿದ್ದಾರೆಂದು;

(iii) ಅವನು ಪಂಚಾಯತ್‌ನ ನಾಲ್ಕು ಒಂದಾದ ಮೇಲೊಂದರಂತೆ ಆದ ಸಭೆಗಳಿಗೆ ಹಾಜರಾಗಲು ತಪ್ಪಿದ್ದರೆ, ಮತ್ತು ಅಧ್ಯಕ್ಷನಾಗಲಿ ಅಥವಾ ಉಪಾಧ್ಯಕ್ಷನಾಗಲಿ ಸಭೆಯನ್ನು ಕರೆಯಬೇಕಾಗಿದ್ದಾಗ ಅಥವಾ ಅಗತ್ಯವಾಗಿದ್ದಾಗ ಒಂದಾದ ಮೇಲೊಂದರಂತೆ ನಡೆಯಬೇಕಾದ ಎರಡು ಸಭೆಗಳನ್ನು ಕರೆಯಲು ತಪ್ಪಿದ್ದಾನೆಂದು; ಅಥವಾ

(iv) ಚುನಾವಣೆ ಸಂದರ್ಭದಲ್ಲಿ ಪರಿಗಣನೆಗಾಗಿ ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಪಂಚಾಯತಿಯ ಸದಸ್ಯ ಅಥವಾ ಅಧ್ಯಕ್ಷ ಅಥವಾ ಉಪಾಧ್ಯಕ್ಷರ ಹುದ್ದೆಯ ವ್ಯಾಪಾರಕ್ಕೆ ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಪಂಚಾಯತಿಯ ಯಾವುದೇ ಮತದಾರ ಅಥವಾ ಸದಸ್ಯನನ್ನು ಸೆಳೆಯುವುದು ಅಥವಾ ದಬ್ಬಾಳಿಕೆ ಅಥವಾ ವಂಚನೆ ಮಾಡಿದ್ದಾನೆಂದು;

(v) ಪಂಚಾಯತ್‌ನ ಯಾವುದೇ ಬೇರೆ ರೀತಿಯ ಕಾಮಗಾರಿಯನ್ನು ಕಾರ್ಯಗತಗೊಳಿಸುವಾಗ, ಕರಾರು ಸಂಬಂಧದ ಅಥವಾ ಕಾಮಗಾರಿಗೆ ಸಂಬಂಧಿಸಿದ ಯಾವುದೇ ವ್ಯವಹಾರದಲ್ಲಿ ಕುಟುಂಬದ ಹತ್ತಿರದ ಸಂಬಂಧಿಯಾಗಿರುವ ಯಾವೊಬ್ಬ ವ್ಯಕ್ತಿಯೊಂದಿಗೆ ಪ್ರತ್ಯಕ್ಷವಾಗಿ ತೊಡಗಿರುವುದು ಕಂಡುಬಂದರೆ ಅಥವಾ ಪಾಲುದಾರನಂತೆ, ನೌಕರನಂತೆ ಅಥವಾ ಅಂಥ ಅನ್ಯಥಾ ಸಂಘಸಂಸ್ಥೆ ಮಂಡಲಿಯಲ್ಲಿ ಸದಸ್ಯನಂತೆ ಸಹಭಾಗಿಯಾಗಿರುವನೆಂದು,

– ಕಂಡು ಬಂದರೆ, ಅವನಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶ ನೀಡಿದ ನಂತರ ಮತ್ತು ಅಗತ್ಯವೆಂದು ತಾನು ಭಾವಿಸಿದಂಥ ವಿಚಾರಣೆ ಮಾಡಿದ ನಂತರ ತೆಗೆದು ಹಾಕುವುದು ಸೂಕ್ತವೆಂದು ಭಾವಿಸಿದ್ದರೆ ಆ ಸದಸ್ಯನನ್ನು ಆತನ ಸದಸ್ಯತ್ವದಿಂದ ತೆಗೆದುಹಾಕಬಹುದು.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ, ಕುಟುಂಬದ ಹತ್ತಿರದ ಬಂಧುಗಳು ಎಂದರೆ:–

(ಎ) ಆಕೆಯ ಅಥವಾ ಆತನೊಂದಿಗೆ ವಾಸವಾಗಿರುವ ವ್ಯಕ್ತಿಯ ಪತ್ನಿ ಅಥವಾ ಪತಿ;

(ಬಿ) ಮಗ ಅಥವಾ ಮಗಳು ಅಥವಾ ಮಲಮಗ ಅಥವಾ ಮಲಮಗಳು,

(ಸಿ) ಅಂಥ ವ್ಯಕ್ತಿಯ ಮೇಲೆ ಸಂಪೂರ್ಣವಾಗಿ ಅವಲಂಬಿತನಾಗಿರುವ, ರಕ್ತಸಂಬಂಧವಾಗಿರಲಿ ಅಥವಾ ವಿವಾಹದಿಂದಾಗಲಿ, ಸಂಬಂಧಿಸಿದ ಯಾವೊಬ್ಬ ಇತರ ವ್ಯಕ್ತಿ.

(2) ಯಾವ ಅಧ್ಯಕ್ಷನನ್ನು ಅಥವಾ ಉಪಾಧ್ಯಕ್ಷನನ್ನು ಅಥವಾ ಸದಸ್ಯನನ್ನು ಹಾಗೆ ತೆಗೆದು ಹಾಕಲಾಗಿದೆಯೋ ಆ ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ಅಥವಾ ಸದಸ್ಯನು, ಸದಸ್ಯನಾಗಿ ಅಂಥ ಸ್ಥಾನದ ಪ್ರಕಾರ್ಯಗಳನ್ನು ನಿರ್ವಹಿಸುವುದು ನಿಂತು ಹೋಗತಕ್ಕದ್ದು ಮತ್ತು ಅಧಿನಿಯಮದ 12ನೇ ಪ್ರಕರಣದಲ್ಲಿ ಹೇಳಿರುವಂತೆ ಯಾವುದೇ ಪಂಚಾಯತ್‌ಗೆ ಮುಂದಿನ ಆರು ವರ್ಷಗಳವರೆಗೆ ಚುನಾವಣೆಗೆ ಸ್ಪರ್ಧಿಸಲು ಅನರ್ಹನಾಗತಕ್ಕದ್ದು.

**43ಬಿ. ಸದಸ್ಯರಿಂದ ಆಸ್ತಿಗಳ ಮತ್ತು ಹೊಣೆಗಾರಿಕೆಗಳ ಘೋಷಣೆ:** (1) ಪ್ರತಿಯೊಬ್ಬ ಸದಸ್ಯನು, ತಾನು ಮತ್ತು ತನ್ನ ಅವಿಭಕ್ತ ಕುಟುಂಬದ ಎಲ್ಲ ಸದಸ್ಯರು ಎರಡು ಲಕ್ಷಕ್ಕಿಂತ ಹೆಚ್ಚಿನ ಚರ ಮತ್ತು ಸ್ಥಿರ ಆಸ್ತಿಯನ್ನು ಮತ್ತು ಹೊಣೆಗಾರಿಕೆಗಳನ್ನು ಹೊಂದಿರುವುದರ ಬಗ್ಗೆ ರಾಜ್ಯ ಚುನಾವಣಾ ಆಯೋಗದ ಮುಂದೆ ಘೋಷಣೆಯನ್ನು ನಿಯಮಿಸಬಹುದಾದಂಥ ನಮೂನೆಯಲ್ಲಿ ತನ್ನ ಪದಾವಧಿಯು ಪ್ರಾರಂಭವಾದ ದಿನಾಂಕದಿಂದ ಮೂರು ತಿಂಗಳ ಒಳಗೆ ಮತ್ತು ಪ್ರತಿ ಕ್ಯಾಲೆಂಡರ್ ವರ್ಷದಲ್ಲಿ ಅವನ ಅಧಿಕಾರಾವಧಿ ಮುಗಿಯುವ ತನಕ ಮತ್ತು ಪ್ರತಿ ಆರ್ಥಿಕ ವರ್ಷ ಮುಕ್ತಾಯವಾದ ಒಂದು ತಿಂಗಳ ಒಳಗೆ ಸಂಬಂಧಪಟ್ಟ ಗ್ರಾಮಪಂಚಾಯತ್‌ನ ಪಂಚಾಯತ್ ಅಭಿವೃದ್ಧಿ ಅಧಿಕಾರಿಯ ಮೂಲಕ ದಾಖಲು ಮಾಡತಕ್ಕದ್ದು:

ಪರಂತು, ಹಣಕಾಸು ವರ್ಷ ಮುಕ್ತಾಯವಾಗುವ ಎರಡು ತಿಂಗಳಿಗಿಂತ ಮೊದಲು ಅಂಥ ಸದಸ್ಯನ ಪದಾವಧಿಯು ಪ್ರಾರಂಭವಾದರೆ, ಅಂಥ ಸದಸ್ಯನು ಮುಂದಿನ ಹಣಕಾಸು ವರ್ಷ ಪ್ರಾರಂಭವಾದ ನಂತರ ಎರಡು ತಿಂಗಳೊಳಗೆ ತನ್ನ ಘೋಷಣೆಯನ್ನು ದಾಖಲು ಮಾಡತಕ್ಕದ್ದು.

(2) ಆಯಾ ಪಂಚಾಯತ್‌ನ ಪಂಚಾಯತ್ ಅಭಿವೃದ್ಧಿ ಅಧಿಕಾರಿಯು, ಎಲ್ಲ ಸದಸ್ಯರು ದಾಖಲು ಮಾಡಿದ ಘೋಷಣೆಯನ್ನು ಸ್ವೀಕರಿಸತಕ್ಕದ್ದು ಮತ್ತು ಆ ವರ್ಷದ ಮೇ ಮೊದಲ ವಾರದಲ್ಲಿ ರಾಜ್ಯ ಚುನಾವಣಾ ಆಯೋಗಕ್ಕೆ ಕಳುಹಿಸತಕ್ಕದ್ದು ಮತ್ತು ತಡವಾಗಿ ಸಲ್ಲಿಸಿದ ಸಂದರ್ಭದಲ್ಲಿ, ವರ್ಷದ ಜುಲೈ ಮೊದಲನೆ ವಾರದಲ್ಲಿ ಘೋಷಣೆಯನ್ನು, ದಾಖಲು ಮಾಡಿದ ಸದಸ್ಯರ ಪಟ್ಟಿಯನ್ನು ಮತ್ತು ಘೋಷಣೆಯನ್ನು ಮಾಡದೆ ಇರುವಂಥ ಸದಸ್ಯರ ಪಟ್ಟಿಯನ್ನು ರಾಜ್ಯ ಚುನಾವಣಾ ಆಯೋಗಕ್ಕೆ ಕಳುಹಿಸತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಘೋಷಣೆಯನ್ನು ದಾಖಲು ಮಾಡಿರುವಂಥ ಸದಸ್ಯ, ಆನಂತರ ಯಾವುದೇ ಸ್ವತ್ತನ್ನು ಅಥವಾ ಇತರ ಆಸ್ತಿಯನ್ನು ಆರ್ಜಿಸಿದರೆ ಅಥವಾ ವಿಲೆ ಮಾಡಿದರೆ ಸಂದರ್ಭಾನುಸಾರವಾಗಿ ಹಾಗೆ ಸ್ವಾಧೀನಪಡಿಸಿಕೊಂಡ ಅಥವಾ ವಿಲೆ ಮಾಡಿದ ದಿನಾಂಕದಿಂದ ನಲವತ್ತೈದು ದಿವಸಗಳ ಒಳಗಾಗಿ ಆ ಬಗ್ಗೆ ಪಂಚಾಯತ್‌ನ ಪಂಚಾಯತ್ ಅಭಿವೃದ್ಧಿ ಅಧಿಕಾರಿಯ ಮೂಲಕ ರಾಜ್ಯ ಚುನಾವಣಾ ಆಯೋಗದ ಮುಂದೆ ಮತ್ತೆ ಘೋಷಣೆಯನ್ನು ದಾಖಲು ಮಾಡತಕ್ಕದ್ದು ಮತ್ತು ಪಂಚಾಯತ್ ಅಭಿವೃದ್ಧಿ ಅಧಿಕಾರಿಯು (1)ನೇ ಉಪಪ್ರಕರಣದಲ್ಲಿ ಹೇಳಿರುವ ಅದೇ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

(4) ಸದಸ್ಯನು ಘೋಷಣೆಯನ್ನು ನಿಗದಿತ ಅವಧಿಯೊಳಗೆ ದಾಖಲು ಮಾಡದಿದ್ದರೆ ಅಥವಾ ಸುಳ್ಳು ಘೋಷಣೆಯನ್ನು ದಾಖಲು ಮಾಡಿರುವುದು ಕಂಡುಬಂದರೆ, ರಾಜ್ಯ ಚುನಾವಣಾ ಆಯುಕ್ತರು, ಅಹವಾಲನ್ನು ಹೇಳಿಕೊಳ್ಳಲು ಅವನಿಗೆ ಅವಕಾಶವನ್ನು ನೀಡಿದ ನಂತರ, ಸದಸ್ಯತ್ವದಿಂದ ಅವನನ್ನು ತೆಗೆದುಹಾಕತಕ್ಕದ್ದು ಮತ್ತು ಅವನ ಸ್ಥಾನವು ಖಾಲಿಯಾಗಿದೆ ಎಂದು ಘೋಷಿಸತಕ್ಕದ್ದು."

**14. 44ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 44ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ, (ಎ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಅನುಸೂಚಿತ ಜಾತಿಯ ಯಾವೊಬ್ಬ ವ್ಯಕ್ತಿಯು ಲಭ್ಯವಿರದಿದ್ದರೆ, ಆ ವರ್ಗಕ್ಕೆ ಮೀಸಲಾದ ಸ್ಥಾನಗಳನ್ನು ಅನುಸೂಚಿತ ಪಂಗಡಗಳ ವ್ಯಕ್ತಿಯಿಂದ ಮತ್ತು ಅನುಸೂಚಿತ ಪಂಗಡದ ವ್ಯಕ್ತಿಯು ಲಭ್ಯವಿರದಿದ್ದರೆ ಅನುಸೂಚಿತ ಜಾತಿಯ ವ್ಯಕ್ತಿಯಿಂದ ತುಂಬತಕ್ಕದ್ದು."

**15. 45ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 45ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ "ಗೊತ್ತುಪಡಿಸಿರುವ ನ್ಯಾಯಿಕ ಅಧಿಕಾರಿಯ" ಎಂಬ ಪದಗಳಿಗೆ "ಗೊತ್ತುಪಡಿಸಿದ ನ್ಯಾಯಾಲಯವು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**16. 46ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 46ನೇ ಪ್ರಕರಣದಲ್ಲಿ (2)ನೇ ಉಪಪ್ರಕರಣದಲ್ಲಿ "ಮತ್ತು ಉಪಾಧ್ಯಕ್ಷನ" ಎಂಬ ಪದಗಳಿಗೆ "ಉಪಾಧ್ಯಕ್ಷ ಮತ್ತು ಸ್ಥಾಯಿ ಸಮಿತಿಯ ಅಧ್ಯಕ್ಷ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**17. 47ನೇ ಪ್ರಕರಣದ ತಿದ್ದುಪಡಿ.–** ಅಧಿನಿಯಮದ 47ನೇ ಪ್ರಕರಣದಲ್ಲಿ "ಅಧ್ಯಕ್ಷನು ಮತ್ತು ಉಪಾಧ್ಯಕ್ಷನು ಇಲ್ಲದಿದ್ದಾಗ" ಎಂಬ ಪದಗಳ ತರುವಾಯ "ಸಂಬಂಧಿಸಿದ ಗ್ರಾಮಪಂಚಾಯತ್‌ನ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯ ಅಧ್ಯಕ್ಷನು, ಅಂಥ ಅಧ್ಯಕ್ಷನು ಇಲ್ಲದಿದ್ದಾಗ" ಎಂಬ ಪದಗಳನ್ನು ಸೇರಿಸತಕ್ಕದ್ದು.

**18. 48ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 48ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಗ್ರಾಮಪಂಚಾಯತಿಯ ಅಧ್ಯಕ್ಷ ಅಥವಾ ಉಪಾಧ್ಯಕ್ಷನು, ತನ್ನ ಪದಕ್ಕೆ ಅಥವಾ ಸದಸ್ಯತ್ವಕ್ಕೆ ರಾಜೀನಾಮೆಯನ್ನು ನೀಡತಕ್ಕದ್ದು ಅಥವಾ,–

(i) ದೈಹಿಕ ಅಥವಾ ಮಾನಸಿಕ ಅಶಕ್ತತೆ ಉಳ್ಳವನೆಂದು ರಾಜ್ಯ ಚುನಾವಣಾ ಆಯೋಗವು ಅನುಮೋದಿಸಿರುವ ಸಕ್ಷಮ ಪ್ರಾಧಿಕಾರವು ಪ್ರಮಾಣಿಕರಿಸಿರುವುದರ ರುಜುವಾತಿನ ಆಧಾರದ ಮೇಲೆ; ಅಥವಾ

(ii) ಕೇಂದ್ರ ಸರ್ಕಾರದಲ್ಲಿ ಅಥವಾ ರಾಜ್ಯ ಸರ್ಕಾರದಲ್ಲಿ ಅಥವಾ ಸಾರ್ವಜನಿಕ ಉದ್ಯಮಗಳಲ್ಲಿ ಉದ್ಯೋಗದಲ್ಲಿರುವುದರ ಆಧಾರದ ಮೇಲೆ;

– ಆತನನ್ನು ತೆಗೆದುಹಾಕಲು ಬದ್ಧನಾಗಿರತಕ್ಕದ್ದು:

ಮತ್ತು ಪರಂತು, ಅಸಿಸ್ಟೆಂಟ್ ಕಮೀಷನರನು, ರಾಜೀನಾಮೆಯ ಕಾರಣವನ್ನು ವಿಚಾರಣೆ ಮಾಡತಕ್ಕದ್ದು ಮತ್ತು ಬೆದರಿಕೆ, ಒತ್ತಾಯ, ಅನುಚಿತ ಪ್ರಭಾವ ಮತ್ತು ಪ್ರಲೋಭನೆಯಿಂದಾಗಿ ರಾಜೀನಾಮೆಯನ್ನು ಸಲ್ಲಿಸಿಲ್ಲವೆಂದು ಮತ್ತು ಸ್ವಇಚ್ಛೆಯಿಂದ ಸಲ್ಲಿಸಿದ್ದಾನೆಂದು ಮನಗಾಣತಕ್ಕದ್ದು:

ಮತ್ತೂ ಪರಂತು, ಡೆಪ್ಯುಟಿ ಕಮೀಷನರರು, ದೂರನ್ನು ಸ್ವೀಕರಿಸಿದ ತರುವಾಯ, ಬೆದರಿಕೆ, ಒತ್ತಾಯ ಅನುಚಿತ ಪ್ರಭಾವ ಮತ್ತು ಪ್ರಲೋಭನೆಯಿಂದಾಗಿ ರಾಜೀನಾಮೆಯನ್ನು ಸಲ್ಲಿಸಲಾಗಿದೆ ಮತ್ತು ಸ್ವಇಚ್ಛೆಯಿಂದ ಸಲ್ಲಿಸಲಾಗಿಲ್ಲವೆಂಬ ಬಗ್ಗೆ ವಿಚಾರಣೆ ಮಾಡತಕ್ಕದ್ದು ಮತ್ತು ಅಂಥ ರಾಜೀನಾಮೆಯನ್ನು ಸ್ವೀಕರಿಸತಕ್ಕದ್ದಲ್ಲ"

**19. 49ನೇ ಪ್ರಕರಣದ ತಿದ್ದುಪಡಿ:** ಮೂಲ ಅಧಿನಿಯಮದ 49ನೇ ಪ್ರಕರಣದಲ್ಲಿ,–

(ಎ) ಅಸ್ತಿತ್ವದಲ್ಲಿರುವ ಪ್ರಕರಣಕ್ಕೆ (1)ನೇ ಉಪಪ್ರಕರಣ ಎಂದು ಮರು ಸಂಖ್ಯೆ ನೀಡತಕ್ಕದ್ದು ಮತ್ತು ಹಾಗೆ ಮರು ಸಂಖ್ಯೆ ನೀಡಿದ (1)ನೇ ಉಪಪ್ರಕರಣದ,–

(i) ಮೊದಲನೇ ಪರಂತುಕದಲ್ಲಿ, "ಮೂರನೇ ಒಂದರಷ್ಟಕ್ಕಿಂತ" ಎಂಬ ಪದಗಳಿಗೆ "ಅರ್ಧಕ್ಕಿಂತ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) ಎರಡನೇ ಪರಂತುಕದಲ್ಲಿ, "ಒಂದು ವರ್ಷದೊಳಗೆ" ಎಂಬ ಪದಗಳಿಗೆ "ಮೊದಲ ಮೂವತ್ತು ತಿಂಗಳುಗಳ ಒಳಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(iii) ಮೂರನೇ ಪರಂತುಕದಲ್ಲಿ, "ಒಂದು ವರ್ಷದೊಳಗೆ" ಎಂಬ ಪದಗಳಿಗೆ "ಎರಡು ವರ್ಷಗಳ ಒಳಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) ಹಾಗೆ ಮರು ಸಂಖ್ಯೆ ನೀಡಿದ (1)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ,–

"(2) (1) ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಪಂಚಾಯತ್‌ನ ಯಾವುದೇ ಸ್ಕೀಮು, ಕ್ರಿಯಾಯೋಜನೆಯನ್ನು ಅಥವಾ ಸರ್ಕಾರದ ನಿರ್ದೇಶನವನ್ನು ಅಥವಾ ಪಂಚಾಯತ್‌ನ ಪ್ರಾಜೆಕ್ಟ್‌ನ್ನು ಕಾರ್ಯಗತಗೊಳಿಸುವಾಗ ಅಥವಾ ತನ್ನ ಅಧಿಕಾರವನ್ನು ಅಥವಾ ಪ್ರಾಧಿಕಾರವನ್ನು ದುರ್ಬಳಕೆ ಅಥವಾ ದುರುಪಯೋಗ ಮಾಡಿಕೊಂಡಿದ್ದಾನೆಂಬ ಅಥವಾ ತನ್ನ ಸದಸ್ಯತ್ವದ ಕಾಲಾವಧಿಯಲ್ಲಿ ಪಂಚಾಯತ್‌ನ ನಿಧಿಗಳನ್ನು ಅಥವಾ ಇತರ ಆಸ್ತಿಗಳನ್ನು ದುರುಪಯೋಗಪಡಿಸಿಕೊಂಡಿದ್ದಾನೆಂಬ ಅಥವಾ ತನ್ನ ಕರ್ತವ್ಯಗಳನ್ನು ನಿರ್ವಹಿಸುವಾಗ ಅನ್ಯಥಾ ಭ್ರಷ್ಟಾಚಾರದಲ್ಲಿ ತೊಡಗಿದ್ದಾನೆಂಬ ನಿರ್ದಿಷ್ಟ ಆಪಾದನೆ ಮೇಲೆ ಹೊರತು, ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ವಿರುದ್ಧ ಅವಿಶ್ವಾಸ ನಿರ್ಣಯವನ್ನು ಮಂಡಿಸತಕ್ಕದ್ದಲ್ಲ."

**20. 52ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 52ನೇ ಪ್ರಕರಣದಲ್ಲಿ, (5)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ ಅಂಥ ಸಾಮಾನ್ಯ ಸಭೆ ಅಥವಾ ವಿಶೇಷ ಸಭೆ ಎಂಬ ಪದವು ಅಂಥ ಸಾಮಾನ್ಯ ಸಭೆಯ ಅಥವಾ ಸಂದರ್ಭಾನುಸಾರವಾಗಿ ವಿಶೇಷ ಸಭೆಯ ವಿಸ್ತರಿಸಿದ ಸಭೆಯನ್ನು ಒಳಗೊಳ್ಳುತ್ತದೆ.

(6) ಗ್ರಾಮಪಂಚಾಯತ್ ಕಾರ್ಯಕಲಾಪಗಳನ್ನು ಪ್ರಸಾರ ಮಾಡಬೇಕೆಂದು ಪಂಚಾಯತ್ ಅಭಿಪ್ರಾಯಪಟ್ಟರೆ, ಪ್ರತಿಯೊಂದು ಸಭೆಯ ಕಾರ್ಯಕಲಾಪಗಳನ್ನು ಪ್ರಸಾರ ಮಾಡಲು ಅನುಮತಿಸಬಹುದು."

**21. 53ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 53ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ, ಪರಂತುಕಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಪರಂತು, ಅಧ್ಯಕ್ಷನ ಅಥವಾ ಉಪಾಧ್ಯಕ್ಷನ ಚುನಾವಣೆಯ ಉದ್ದೇಶಕ್ಕಾಗಿ ಕರೆದ ಯಾವುದೇ ಸಭೆಯಲ್ಲಿ ಸಭೆಗೆ ಗೊತ್ತುಪಡಿಸಿದ ಸಮಯದಲ್ಲಿ ಕೋರಂ ಇಲ್ಲದಿದ್ದರೆ, ಅಧ್ಯಕ್ಷತೆ ವಹಿಸುವ ವ್ಯಕ್ತಿಯು ಮೂವತ್ತು ನಿಮಿಷಗಳ ತನಕ ಕಾಯತಕ್ಕದ್ದು ಮತ್ತು ಅಂಥ ಸಮಯದೊಳಗೂ ಕೋರಂ ಇಲ್ಲದಿದ್ದರೆ, ಸಾರ್ವಜನಿಕ ರಜೆ ದಿನ ಅಲ್ಲದ ಕೆಲಸದ ದಿನದಂದು ಅಂಥ ಸಮಯಕ್ಕೇ ಸಭೆಯನ್ನು ಆತನು/ಆಕೆಯು ಮುಂದೂಡಬಹುದು ಮತ್ತು ಮುಂದೂಡಿದ ಎರಡನೇ ದಿನವೂ ಕೋರಂ ಇರದಿದ್ದರೆ, ಚುನಾವಣೆಯನ್ನು ನಡೆಸತಕ್ಕದ್ದು. ಇದಕ್ಕೆ ಕೋರಂ ಅಗತ್ಯ ಇರತಕ್ಕದ್ದಲ್ಲ."

**22. 57ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 57ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಸಂಬಂಧಪಟ್ಟ ಗ್ರಾಮಪಂಚಾಯತ್ ಅಂಗೀಕರಿಸಿದ ಯಾವುದೇ ನಿರ್ಣಯವು ಅಧಿನಿಯಮದ ಅಥವಾ ನಿಯಮಗಳ ನಿಬಂಧನೆಗಳನ್ನು ಉಲ್ಲಂಘಿಸಿದೆಯೆಂದು ಸಂಬಂಧಿಸಿದ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಯು ತೀರ್ಮಾನಿಸಿದರೆ, ಅದನ್ನು ಅಧಿನಿಯಮದ 237ನೇ ಪ್ರಕರಣದ ಅಡಿಯಲ್ಲಿ ಕ್ರಮ ತೆಗೆದುಕೊಳ್ಳುವುದಕ್ಕಾಗಿ ತಾಲ್ಲೂಕು ಪಂಚಾಯತ್ ಅಧ್ಯಕ್ಷನಿಗೆ ಕಳುಹಿಸಿಕೊಡತಕ್ಕದ್ದು."

**23. 58ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 58ನೇ ಪ್ರಕರಣದಲ್ಲಿ, (3)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು; ಎಂದರೆ,–

"(4) ಗ್ರಾಮಪಂಚಾಯತ್‌ವು ಸ್ಥಳೀಯ ಸ್ವಯಮಾಡಳಿತ ಸಂಸ್ಥೆಯಾಗಿರತಕ್ಕದ್ದು ಮತ್ತು ಸ್ವಯಮಾಡಳಿತದ ಸ್ಥಳೀಯ ಸಂಸ್ಥೆಯಂತೆಯೇ ಪ್ರಕಾರ್ಯಗಳನ್ನು ನಿರ್ವಹಿಸಲು ಸಾಧ್ಯವಾಗುವಂತೆ ಅಗತ್ಯವೆನಿಸಬಹುದಾದಂಥ ಅಧಿಕಾರಗಳನ್ನು, ಪ್ರಾಧಿಕಾರವನ್ನು, ಪ್ರಕಾರ್ಯಗಳನ್ನು, ಕಾರ್ಯನಿರ್ವಾಹಕರನ್ನು ಮತ್ತು ನಿಧಿಗಳನ್ನು ರಾಜ್ಯವು ಗ್ರಾಮಪಂಚಾಯತ್‌ಗೆ ಪ್ರದಾನ ಮಾಡತಕ್ಕದ್ದು.

(5) ಪಂಚಾಯತ್ ಪ್ರದೇಶದ ಜನರ ಅಗತ್ಯತೆಗಳನ್ನು ಈಡೇರಿಸುವುದು ಪ್ರತಿಯೊಂದು ಗ್ರಾಮ ಪಂಚಾಯತ್‌ನ ಕರ್ತವ್ಯವಾಗಿರತಕ್ಕದ್ದು ಮತ್ತು Iನೇ ಅನುಸೂಚಿಯಲ್ಲಿ ಹೇಳಿರುವ ವಿಷಯಗಳನ್ನು ಮತ್ತು ಗ್ರಾಮಪಂಚಾಯತ್‌ಗೆ ಸಂಬಂಧಿಸಿದಂತೆ ಜವಾಬ್ದಾರಿ ನಕ್ಷೆಯಲ್ಲಿ ನಿರೂಪಿಸಿರುವುದನ್ನು ನಿರ್ವಹಿಸಲು ಅಧಿಕಾರಗಳನ್ನು ಗ್ರಾಮ ಪಂಚಾಯತ್ ಹೊಂದಿರತಕ್ಕದ್ದು ಮತ್ತು ಗ್ರಾಮ ಪಂಚಾಯತ್ ತನ್ನ ಸುಪರ್ದಿನಲ್ಲಿರುವ ನಿಧಿಯ ಲಭ್ಯತೆಗೆ ಒಳಪಟ್ಟು ಎಲ್ಲರಿಗೂ ಸಾಮಾಜಿಕ ನ್ಯಾಯವನ್ನು ಒದಗಿಸುವ ನಿಟ್ಟಿನಲ್ಲಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಗಾಗಿ ಕಾರ್ಯಕ್ರಮಗಳನ್ನು ಸಿದ್ಧಪಡಿಸಲು ಮತ್ತು ಅನುಷ್ಠಾನಗೊಳಿಸಲು ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಪಂಚಾಯತ್ ಪ್ರದೇಶದೊಳಗೆ ಈ ಮುಂದಿನ ವಿಷಯಗಳಿಗೆ ಸಂಬಂಧಪಟ್ಟಂತೆ ಎಂದರೆ,–

(i) ಮುಕ್ತ ಮತ್ತು ಸ್ವತಂತ್ರ ಪರಿಸರದಲ್ಲಿ ತಮ್ಮ ಹಕ್ಕುಗಳನ್ನು ಚಲಾಯಿಸುವುದಕ್ಕೆ ಅನುವು ಮಾಡಿಕೊಡುವಂಥ ಎಲ್ಲಾ ನಾಗರಿಕರು ಸುರಕ್ಷಿತವಾಗಿರುವಂಥ ಮತ್ತು ಹಿತಕರವಾದ ಪರಿಸರ ಇರುವುದನ್ನು ಸುನಿಶ್ಚಿತಪಡಿಸಿಕೊಳ್ಳಲು ಮತ್ತು ತನ್ನ ಜನರಿಗೆ ಯಾವುದೇ ಬಗೆಯ ದುರುಪಯೋಗ ಆಗದಂತೆ ಮತ್ತು ಶೋಷಣೆ ಆಗದಂತೆ ರಕ್ಷಿಸಲು ಆಯಾ ಜನವಸತಿಸಭಾ, ವಾರ್ಡ್‌ಸಭಾ ಮತ್ತು ಗ್ರಾಮಸಭಾ ಸಲಹೆ ಮಾಡಿದ ಕ್ರಮಗಳ ಪ್ರಕಾರ ಕಾರ್ಯಗಳನ್ನು ನಿರ್ವಹಿಸುವುದಕ್ಕೆ;

(ii) ಜನವಸತಿಸಭಾ, ವಾರ್ಡ್‌ಸಭಾ ಮತ್ತು ಗ್ರಾಮಸಭಾಗಳು ಗುರುತಿಸಿದ ಅಪಾಯಕಾರಕಗಳ ವಿರುದ್ಧ ಕ್ರಮಗಳನ್ನು ತೆಗೆದುಕೊಳ್ಳುವುದಕ್ಕೆ ಮತ್ತು ಪಂಚಾಯತ್‌ನಲ್ಲಿ ವಾಸಿಸುತ್ತಿರುವ ಎಲ್ಲಾ ನಾಗರಿಕರ ಸುರಕ್ಷತೆಗೆ, ಭದ್ರತೆಗೆ ಮತ್ತು ಸ್ವಾತಂತ್ರ್ಯಕ್ಕೆ ಕ್ರಮಗಳನ್ನು ಅನುಷ್ಠಾನಗೊಳಿಸುವುದಕ್ಕೆ;

(iii) ಸಮಾಜದ ಸುರಕ್ಷಿತವಲ್ಲದ ವರ್ಗಗಳ ಜನರ ಹಕ್ಕುಗಳನ್ನು ಮತ್ತು ಹಿತಾಸಕ್ತಿಗಳನ್ನು ಕಾಪಾಡುವುದಕ್ಕೆ ಮತ್ತು ಅವರ ಹಕ್ಕುಗಳ ಉಲ್ಲಂಘನೆಗೆ ಆಸ್ಪದ ಕೊಡುವಂಥ ಆಚರಣೆಗಳ ಮೇಲೆ ನಿಗಾ ಇಡುವುದಕ್ಕೆ ಮತ್ತು ತಡೆಗಟ್ಟುವುದಕ್ಕೆ ಮತ್ತು ವ್ಯಕ್ತಿಗಳ ಘನತೆ ಮತ್ತು ಸ್ವಾತಂತ್ರವನ್ನು ರಕ್ಷಿಸುವ ದೃಷ್ಟಿಯಿಂದ ತನ್ನ ವ್ಯಾಪ್ತಿಗೊಳಪಡುವ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳುವುದಕ್ಕೆ;

(iv) ಯಾರೇ ವ್ಯಕ್ತಿಯು ಅಥವಾ ಗುಂಪು ಅಥವಾ ಕಾರ್ಯಸಂಸ್ಥೆಯು ಪಂಚಾಯತ್‌ನ ಯಾವೊಬ್ಬ ನಾಗರಿಕನನ್ನು ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಲೈಂಗಿಕವಾಗಿ ಶೋಷಣೆ ಮಾಡುವುನ್ನು ತಡೆಗಟ್ಟಲು ಪ್ರಯತ್ನಗಳನ್ನು ಮಾಡುವುದಕ್ಕೆ;

(v) ಎಲ್ಲಾ ಗುಂಪುಗಳಲ್ಲಿ ಕೋಮು ಸೌಹಾರ್ದತೆಗೆ ಮತ್ತು ಒಗ್ಗಟ್ಟಿಗೆ ಉತ್ತೇಜನ ನೀಡುವುದಕ್ಕೆ;

(vi) ಜನವಸತಿಸಭಾಗಳು, ವಾರ್ಡ್‌ಸಭಾಗಳು ಮತ್ತು ಗ್ರಾಮಸಭಾಗಳು ಸೇರಿದಂತೆ ಗ್ರಾಮಪಂಚಾಯತ್‌ನ ಎಲ್ಲಾ ಪ್ರಕಾರ್ಯಗಳನ್ನು, ಸಭೆಗಳನ್ನು ಮತ್ತು ವ್ಯವಹಾರಗಳನ್ನು ಮಹಿಳೆಯರು ಮತ್ತು ದುರ್ಬಲ ವರ್ಗದವರು ಮುಕ್ತವಾಗಿ ಮತ್ತು ಸಕ್ರಿಯವಾಗಿ ಪಾಲ್ಗೊಳ್ಳುವಂಥ ಪರಿಸರದಲ್ಲಿ ನಡೆಸಲಾಗುತ್ತಿದೆಯೆಂಬುದನ್ನು ಸುನಿಶ್ಚಿತಪಡಿಸಿಕೊಳ್ಳತಕ್ಕದ್ದು ಮತ್ತು ಪಂಚಾಯತ್‌ನ ಪ್ರತಿಯೊಂದು ಕಚೇರಿಯಲ್ಲಿ ಮಹಿಳೆಯರು, ಅನುಸೂಚಿತ ಜಾತಿಯವರು ಮತ್ತು ಅನುಸೂಚಿತ ಪಂಗಡದವರು, ಹಿಂದುಳಿದ ವರ್ಗದವರು ಪಾಲ್ಗೊಳ್ಳಲು ಅನುಕೂಲವಾಗುವಂಥ ವಾತಾವರಣವನ್ನು ಕಲ್ಪಿಸುವುದಕ್ಕೆ;

(vii) ಪಂಚಾಯತ್‌ನ ಚುನಾಯಿತ ಸದಸ್ಯರ ಮತ್ತು ಸಿಬ್ಬಂದಿಯ ಕೌಶಲ್ಯ ಅಭಿವೃದ್ಧಿ ಅಗತ್ಯಗಳನ್ನು ಗುರುತಿಸುವುದು, ಸೂಕ್ತ ಸಂಪನ್ಮೂಲ ವ್ಯಕ್ತಿಗಳನ್ನು ಗುರುತಿಸುವುದು ಮತ್ತು ಅಗತ್ಯಬಿದ್ದರೆ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತ್‌ನ ನೆರವಿನೊಂದಿಗೆ ಅವರ ಕೌಶಲದಲ್ಲಿ ಅಭಿವೃದ್ಧಿಯಾಗಿರುವುದನ್ನು ಸುನಿಶ್ಚಿತಪಡಿಸಿಕೊಳ್ಳುವುದಕ್ಕೆ;

(viii) ಎಲ್ಲಾ ಪಂಚಾಯತ್‌ಗಳ ಕಚೇರಿಯಲ್ಲಿ ಮತ್ತು ಅದರ ನಿರ್ವಹಣೆ ಮತ್ತು ನಿಯಂತ್ರಣದಲ್ಲಿರುವ ಸಾರ್ವಜನಿಕ ಕಟ್ಟಡಗಳಲ್ಲಿ ವಿಕಲಚೇತನರಿಗೆ ಗಾಲಿಕುರ್ಚಿಗಳಿಗೆ ಇಳಿಜಾರು ಸೌಲಭ್ಯವನ್ನು ಒದಗಿಸಲಾಗಿದೆಯೆಂಬುದನ್ನು ಖಚಿತಪಡಿಸಿಕೊಳ್ಳುವುದಕ್ಕೆ;

(ix)ಅಗತ್ಯವಾದ ಕಡೆ ಪಂಚಾಯತ್ ಪ್ರದೇಶದ ಒಳಗೆ ಕಟ್ಟಡಗಳಲ್ಲಿ ಅಥವಾ ಕಾಂಪ್ಲೆಕ್ಸ್‌ಗಳಲ್ಲಿ ಶಿಶು ಪಾಲನಾ ಕೇಂದ್ರಗಳನ್ನು ಅಥವಾ ಶಿಶುವಿಹಾರಗಳನ್ನು ಒದಗಿಸುವುದಕ್ಕೆ;

(x) ಸಾಂಸ್ಕೃತಿಕ ಹಬ್ಬಗಳನ್ನು, ಸಾಹಿತ್ಯ ಚಟುವಟಿಕೆಗಳನ್ನು ಮತ್ತು ಕ್ರೀಡೆಗಳನ್ನು ಸಂಘಟಿಸುವುದಕ್ಕೆ ಮತ್ತು ಅವುಗಳಿಗೆ ಉತ್ತೇಜನ ನೀಡುವುದಕ್ಕೆ ಆ ಪ್ರದೇಶದಲ್ಲಿ ದೈಹಿಕ ಶಿಕ್ಷಣಕ್ಕೆ ಮತ್ತು ಕಲೆಗಳಿಗೆ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗೆ ಉತ್ತೇಜನ ನೀಡುವುದು ಮತ್ತು ಪಂಚಾಯತ್ ಜನರ ಪ್ರತಿಭೆ ಅಭಿವ್ಯಕ್ತಗೊಳ್ಳಲು ಅವಕಾಶ ಕಲ್ಪಿಸುವುದಕ್ಕೆ ಮತ್ತು ಅಧಿನಿಯಮಕ್ಕೆ ಮತ್ತು ನಿಯಮಗಳಿಗೆ ಅನುಸಾರವಾಗಿ ಪಂಚಾಯತ್‌ನ ವ್ಯವಹರಣೆಗಳ ನಿರ್ವಹಣೆ ಕೌಶಲ್ಯದೊಂದಿಗೆ ಅವರನ್ನು ಸಜ್ಜುಗೊಳಿಸುವುದಕ್ಕೆ;

(xi)ಪಂಚಾಯತ್ ಪ್ರದೇಶದೊಳಗೆ ವಯಸ್ಕರ ಶಿಕ್ಷಣಕ್ಕೆ, ಚಟಮುಕ್ತಗೊಳಿಸುವುದಕ್ಕೆ (de-addiction) ಮತ್ತು ಕೌಟುಂಬಿಕ ಸಮಾಲೋಚನಾ ಕೇಂದ್ರಗಳಿಗೆ ಉತ್ತೇಜನ ನೀಡುವುದಕ್ಕೆ;

(xii) ಸಗಣಿ ಗುಂಡಿಗಳನ್ನು ಮತ್ತು ಕೃಷಿ ತ್ಯಾಜ್ಯವನ್ನು ವೈಜ್ಞಾನಿಕವಾಗಿ ಸಂಸ್ಕರಿಸುವುದಕ್ಕೆ ಉತ್ತೇಜನ ನೀಡುವುದಕ್ಕೆ;

(xiii) ನೀರಿನ ಸಂರಕ್ಷಣೆ, ನೈಸರ್ಗಿಕ ಪರಿಸರ ನಿವಾಸದ ರಕ್ಷಣೆ ಮತ್ತು ಜೈವಿಕವಾಗಿ ವಿಘಟಿಸಬಹುದಾದ ತ್ಯಾಜ್ಯಗಳ (bio-degradable) ಮರುಬಳಕೆಯ ಬಗ್ಗೆ ಜಾಗೃತಿ ಮೂಡಿಸುವುದಕ್ಕೆ;

(xiv) ಕೃಷಿಗೆ, ಗ್ರಾಮೀಣ ಕೈಗಾರಿಕೆಗಳಿಗೆ, ಸಣ್ಣ ಉದ್ಯಮಗಳಿಗೆ ಮತ್ತು ಸಹಕಾರ ಸಂಘಗಳಿಗೆ ಉತ್ತೇಜನ ನೀಡಿ ಮಹಿಳೆಯರಿಗೆ, ಯುವಕರಿಗೆ, ಅನುಸೂಚಿತ ಜಾತಿಗಳಿಗೆ ಮತ್ತು ಪರಿಶಿಷ್ಟ ಪಂಗಡಗಳಿಗೆ ಮತ್ತು ಹಿಂದುಳಿದ ವರ್ಗಗಳಿಗೆ ಮತ್ತು ದುರ್ಬಲ ವರ್ಗಗಳಿಗೆ ವಿಶೇಷ ಗಮನ ನೀಡಿ ಎಲ್ಲರ ಆರ್ಥಿಕ ಅಭಿವೃದ್ಧಿಗೆ ಉತ್ತೇಜನ ನೀಡುವುದಕ್ಕೆ;

(xv) ನಿವಾಸಿಗಳಲ್ಲಿ ಸಹಕಾರ ಭಾವನೆಗೆ ಉತ್ತೇಜನ ನೀಡುವುದಕ್ಕೆ, ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಸೌಹಾರ್ದತೆ ದೃಷ್ಟಿಯಿಂದ ಆ ಪ್ರದೇಶದಲ್ಲಿ ಎಲ್ಲಾ ಸಹಕಾರಿಗಳಿಗೆ ಉತ್ತೇಜನ ನೀಡುವುದಕ್ಕೆ;

(xvi) ಮಹಿಳೆಯರು, ರೈತರು ಮತ್ತು ಕಾರ್ಮಿಕರು ಸಾಮಾಜಿಕವಾಗಿ ಮುಂದುವರಿಯಲು ಮತ್ತು ಆರ್ಥಿಕವಾಗಿ ಸಬಲರಾಗಲು ಸ್ವ-ಸಹಾಯ ಗುಂಪುಗಳ ರಚನೆಗೆ ಸೌಲಭ್ಯ ಕಲ್ಪಿಸುವುದಕ್ಕೆ;

(xvii) ದುಬಾರಿ ಬಡ್ಡಿ ಸಾಲಗಳ ಅಧಿನಿಯಮ ಮತ್ತು ಲೇವಾದೇವಿದಾರರ ಅಧಿನಿಯಮದ ಉಲ್ಲಂಘನೆಗೆ ಆಸ್ಪದ ಕೊಡುವ ಚಟುವಟಿಕೆಗಳನ್ನು ನಿಯಂತ್ರಿಸುವುದು ಮತ್ತು ಅಂಥ ಚಟುವಟಿಕೆಗಳ ಮೇಲೆ ನಿಗಾ ಇಡುವುದು ಮತ್ತು ಪಂಚಾಯತ್ ಪ್ರದೇಶದಲ್ಲಿ ಜನರ ಶೋಷಣೆ ಆಗುವುದನ್ನು ತಡೆಗಟ್ಟುವುದಕ್ಕಾಗಿ ಸಂಬಂಧಪಟ್ಟ ಪ್ರಾಧಿಕಾರಿಗಳಿಗೆ ಆ ಬಗ್ಗೆ ವರದಿ ಮಾಡುವುದಕ್ಕೆ;

(xviii) ಜ್ಞಾನ ನಿರ್ವಹಣೆಗೆ ಸಿಸ್ಟಂಗಳನ್ನು ರೂಪಿಸುವುದಕ್ಕೆ ಮತ್ತು ಆ ಬಗ್ಗೆ ವ್ಯವಸ್ಥೆ ಮಾಡುವುದಕ್ಕೆ ಮತ್ತು ಜಾತಿವಾರು ಜನಗಣತಿ, ಬೆಳೆ ಗಣತಿ, ಜಾನುವಾರು ಗಣತಿ, ನಿರುದ್ಯೋಗ ವ್ಯಕ್ತಿಗಳ ಮತ್ತು ಬಡತನ ರೇಖೆಗಿಂತ ಕೆಳಗಿರುವ ವ್ಯಕ್ತಿಗಳ ಜಾತಿವಾರು ಗಣತಿಗೆ ಸೇರಿದಂತೆ ಎಲ್ಲಾ ದಾಖಲೆಗಳನ್ನು ನಿರ್ವಹಿಸುವುದಕ್ಕೆ;

(xix) ಗ್ರಾಮಪಂಚಾಯತಿಯ ಪ್ರದೇಶಗಳ ಜನರ ಎಲ್ಲ ಅಧಿಕೃತ ಕೆಲಸ ಕಾರ್ಯಗಳಿಗಾಗಿ 'ಮುಂಚೂಣಿ ಕಾರ್ಯಾಲಯ" ವನ್ನಾಗಿಸುವುದಕ್ಕೆ ಮತ್ತು ಅಂಥ ಅಗತ್ಯತೆಗಳು ಗ್ರಾಮ ಪಂಚಾಯತ್‌ನ ವ್ಯಾಪ್ತಿಯೊಳಗೆ ಇದ್ದರೆ ಅವುಗಳನ್ನು ಪರಾಮರ್ಶಿಸಿ ಅವರ ಅಗತ್ಯತೆಗಳಿಗೆ ಗಮನ ಕೊಡುವುದಕ್ಕೆ ಅಥವಾ ಇತರ ಪಂಚಾಯತ್‌ಗಳೊಂದಿಗೆ, ಸರ್ಕಾರಿ ಏಜೆನ್ಸಿಗಳೊಂದಿಗೆ ಅನುಸರಣಾ ಕ್ರಮ ಕೈಗೊಳ್ಳುವುದಕ್ಕೆ;

(xx) ಪ್ರಾಣಿಗಳ ಮೃತದೇಹವನ್ನು ವಿಲೆ ಮಾಡಲು ಕ್ರಮಗಳನ್ನು ತೆಗೆದುಕೊಳ್ಳುವುದಕ್ಕೆ; ಮತ್ತು

(xxi) ಆ ಪ್ರದೇಶದ ಜೀವಿ ವೈವಿಧ್ಯದ ರಕ್ಷಣೆ ಮಾಡುವುದಕ್ಕೆ ಮತ್ತು ಪೋಷಣೆ ಮಾಡುವುದಕ್ಕೆ;

(6) ಗ್ರಾಮ ಪಂಚಾಯತಿಯು,-

(i) ಜನವಸತಿ ಸಭಾದ, ವಾರ್ಡ್‌ಸಭಾದ ಮತ್ತು ಗ್ರಾಮ ಸಭಾದ ನೆರವಿನೊಂದಿಗೆ ದೂರದೃಷ್ಟಿ ಯೋಜನೆ ಎಂದು ಕರೆಯಲಾಗುವ ಮುನ್ನೋಟ ಯೋಜನೆಯನ್ನು ಸಂಕಲಿಸುವ ಮತ್ತು ರೂಪಿಸುವ ಸಲುವಾಗಿ ಅವುಗಳ ಪ್ರದೇಶದ ಅಭಿವೃದ್ಧಿಗಾಗಿ ಎಲ್ಲಾ ನಿವಾಸಿಗಳ ಅಗತ್ಯತೆಗಳನ್ನು ಮತ್ತು ಅವಶ್ಯಕತೆಗಳನ್ನು ಪ್ರತಿಬಿಂಬಿಸುವ ಗ್ರಾಮಸಭಾ ಯೋಜನೆಗಳನ್ನು ಐದು ವರ್ಷಗಳಿಗೆ ಒಂದು ಬಾರಿ ಪರಿಶೀಲಿಸತಕ್ಕದ್ದು.

(ii) ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಪರಿಸರ ಅಭಿವೃದ್ಧಿ ಕಾರ್ಯಕ್ರಮಗಳ ಮತ್ತು ಗ್ರಾಮಪಂಚಾಯತ್‌ನ ಪ್ರದೇಶದಲ್ಲಿ ಅನುಷ್ಠಾನಗೊಳಿಸಬೇಕಾದ ಕಾರ್ಯಕ್ರಮಗಳ ಆದ್ಯತೆಯನ್ನು ನಿರ್ಧರಿಸುವ ನಿಟ್ಟಿನಲ್ಲಿ, ದೂರದೃಷ್ಟಿ ಯೋಜನೆಯಲ್ಲಿ ಮತ್ತು ಗ್ರಾಮ ಪಂಚಾಯತ್‌ನ ವಾರ್ಷಿಕ ಅಭಿವೃದ್ಧಿ ಯೋಜನೆಗಳಲ್ಲಿ ಸೇರಿಸುವ ವಿಷಯದಲ್ಲಿ ಗ್ರಾಮ ಪಂಚಾಯತ್‌ನಲ್ಲಿರುವ ಪ್ರತಿಯೊಂದು ಗುಂಪಿನ ಹಿತಾಸಕ್ತಿಗಳನ್ನು ಗಣನೆಗೆ ತೆಗೆದುಕೊಂಡು ಗ್ರಾಮಸಭಾ ಅನುಮೋದಿಸಿದ ಎಲ್ಲಾ ಯೋಜನೆಗಳನ್ನು ಪರಿಶೀಲಿಸತಕ್ಕದ್ದು

ಮತ್ತು ಈ ಯೋಜನೆಯನ್ನು ಗ್ರಾಮಪಂಚಾಯತ್ ಮುಂದೆ ಇಡತಕ್ಕದ್ದು ಮತ್ತು ಅದನ್ನು ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಗೆ (ಟಿ.ಪಿ.ಡಿ.ಸಿ) ಕಳುಹಿಸತಕ್ಕದ್ದು. ಈ ಯೋಜನೆಯ ಪ್ರತಿಯನ್ನು ತಾಲೂಕು ಪಂಚಾಯತ್‌ಗೆ ಸಹ ಕಳುಹಿಸತಕ್ಕದ್ದು.

(iii) ನಿವಾಸಿಗಳ ಆರೋಗ್ಯ, ಸುರಕ್ಷತೆ, ಶಿಕ್ಷಣ, ನೆಮ್ಮದಿ, ನಿವಾಸಿಗಳಿಗೆ ಅನುಕೂಲಗಳು ಅಥವಾ ಸಾಮಾಜಿಕ ಅಥವಾ ಆರ್ಥಿಕ ಉನ್ನತಿಗೆ ಉತ್ತೇಜನ ನೀಡಲು ಯಾವುದೇ ಇತರ ಕೆಲಸವನ್ನು ಅಥವಾ ಕಾರ್ಯಕ್ರಮವನ್ನು ಕಾರ್ಯಗತಗೊಳಿಸುವ ಸಲುವಾಗಿ ಅವಕಾಶಗಳನ್ನು ಕಲ್ಪಿಸತಕ್ಕದ್ದು ಮತ್ತು ಪಂಚಾಯತ್ ಪ್ರದೇಶದ ಒಳಗೆ ಪರಿಸರ ಸಂರಕ್ಷಣೆಗೆ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

(iv) ಹಣಕಾಸಿನ ಲಭ್ಯತೆಗೆ ಮತ್ತು ಸರ್ಕಾರವು ನೀಡಿದ ಮಾರ್ಗದರ್ಶನಗಳಿಗೆ ಒಳಪಟ್ಟು ಗ್ರಾಮಸಭಾ ಅನುಮೋದಿಸಿದ ಯೋಜನೆಗಳನ್ನು ಗ್ರಾಮ ಪಂಚಾಯಿತಿಯು ಪರಿಗಣಿಸತಕ್ಕದ್ದು.

(v) ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಪರಿಸರ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಆದ್ಯತಾ ಕ್ರಮ ನಿಗದಿ ಮಾಡಿರುವುದನ್ನು ಮತ್ತು ಆ ಪ್ರದೇಶದಲ್ಲಿ ಅನುಷ್ಠಾನಗೊಳಿಸಬೇಕಾದ ಸ್ಕೀಮುಗಳನ್ನು 'ಆದ್ಯತಾ ಶ್ರೇಯಾಂಕ' ವಿಧಾನದ ಮೇಲೆ ಆಧಾರಿತವಾಗಿವೆಯೆಂಬುದನ್ನು ಸುನಿಶ್ಚಿತಪಡಿಸಿಕೊಳ್ಳತಕ್ಕದ್ದು ಮತ್ತು ಪ್ರದೇಶವು ಹಿಂದುಳಿದಿರುವುದಕ್ಕೆ, ಜನರ ತುರ್ತು ಅಗತ್ಯತೆಯನ್ನು ಮತ್ತು ಆಗುವ ಪರಿಣಾಮದ ಪ್ರಮಾಣವನ್ನು ಮತ್ತು ವ್ಯಾಪ್ತಿಗೆ ಒಳಪಡಿಸಿರುವುದನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು ಮತ್ತು ಇವೆಲ್ಲವಕ್ಕೂ ಸೂಕ್ತ ಗಮನ ನೀಡತಕ್ಕದು.

(7) ನಿಧಿಯ ಲಭ್ಯತೆಗೆ ಒಳಪಟ್ಟು, ಗ್ರಾಮಪಂಚಾಯತ್‌ಗೆ ಪ್ರತಿಯೊಂದು ಕಾರ್ಯವನ್ನು ವಹಿಸಿದಾಗ ಆ ಗ್ರಾಮ ಪಂಚಾಯತ್‌ನಲ್ಲಿ ಸಂಬಂಧಿಸಿದ ಕಾರ್ಯನಿರ್ವಾಹಕರು ಮತ್ತು ನಿಧಿಗಳು ನಿಹಿತವಾಗಿರತಕ್ಕದ್ದು."

**24. 58ಬಿ, 58ಸಿ, 58ಡಿ, 58ಇ, ಮತ್ತು 58ಎಫ್ ಹೊಸ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 58–ಎ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"58ಬಿ. ಮಾನವ ಘನತೆಗೆ ಕಳಂಕ ತರುವ ಪಾರಂಪರಿಕ, ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳನ್ನು ಪ್ರತಿಬಂಧಿಸಲು ಗ್ರಾಮಪಂಚಾಯತಿಯ ಕರ್ತವ್ಯ.–** ಪ್ರತಿಯೊಂದು ಗ್ರಾಮಪಂಚಾಯತಿಯು,–

(i) ವ್ಯಕ್ತಿಗಳ ವಿಶೇಷವಾಗಿ ಮಹಿಳೆಯರ, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಗೆ ಮತ್ತು ದುರ್ಬಲ ವರ್ಗಗಳಿಗೆ ಸೇರಿದ ವ್ಯಕ್ತಿಗಳ ಹಕ್ಕುಗಳು, ಘನತೆ ಮತ್ತು ಸ್ವಾತಂತ್ರ್ಯಕ್ಕೆ ಕಳಂಕ ತರುವ ಯಾವುದೇ ಪಾರಂಪರಿಕ ಅಥವಾ ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಯನ್ನು ಗ್ರಾಮಗಳಲ್ಲಿ ಆಚರಿಸತಕ್ಕದ್ದಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳುವುದು;

(ii) ಅಸ್ಪೃಶ್ಯತೆ, ಸಾಮಾಜಿಕ ಬಹಿಷ್ಕಾರ ಹಾಕುವಿಕೆ ಮತ್ತು ಇತರ ವಿಧವಾದ ಸಾಮಾಜಿಕವಾಗಿ ಹೊರಹಾಕುವ ಆಚರಣೆಯ ಬಗ್ಗೆ ಸಂಬಂಧಪಟ್ಟ ಪ್ರಾಧಿಕಾರಕ್ಕೆ ವರದಿ ಸಲ್ಲಿಸುವುದು;

– ನಿರ್ವಹಿಸಬೇಕಾದ ಕರ್ತವ್ಯವಾಗಿರತಕ್ಕದ್ದು.

**58ಸಿ. ಮಹಿಳೆಯರಿಗೆ ಲೈಂಗಿಕ ಕಿರುಕುಳ ಆಗದಂತೆ ತಡೆಗಟ್ಟುವುದು ಗ್ರಾಮ ಪಂಚಾಯತ್‌ನ ಕರ್ತವ್ಯ.–** ಗ್ರಾಮಪಂಚಾಯತ್ ಪ್ರದೇಶದ ಒಳಗಿರುವ ಕೆಲಸದ ಸ್ಥಳಗಳಲ್ಲಿ, ಶಿಕ್ಷಣ ಸಂಸ್ಥೆಗಳಲ್ಲಿ ಯಾವುದೇ ಇತರ ಸಾರ್ವಜನಿಕ ಸ್ಥಳಗಳಲ್ಲಿ ಮಹಿಳೆಯರ ಮೇಲಾಗುವ ಲೈಂಗಿಕ ಕಿರುಕುಳವನ್ನು ಸಂಬಂಧಪಟ್ಟ ಪ್ರಾಧಿಕಾರಗಳಿಗೆ ವರದಿ ಮಾಡುವುದು ಪ್ರತಿಯೊಂದು ಗ್ರಾಮ ಪಂಚಾಯತ್‌ನ ಕರ್ತವ್ಯವಾಗಿರತಕ್ಕದ್ದು.

**58ಡಿ. ಕಂದಾಯ ಭೂಮಿಯನ್ನು ಹೊರತುಪಡಿಸಿ ಒತ್ತುವರಿ ಮಾಡಿಕೊಂಡಿರುವ ಗ್ರಾಮ ಪಂಚಾಯತಿಯ ಸ್ವತ್ತನ್ನು ಪುನಃ ಸ್ವಾಧೀನ ಪಡೆಯುವ ಕರ್ತವ್ಯ.–**ಪ್ರತಿಯೊಂದು ಗ್ರಾಮಪಂಚಾಯತ್, ವ್ಯಕ್ತಿಗಳಿಂದಾಗಲಿ ಅಥವಾ ಸಂಸ್ಥೆಗಳಿಂದಾಗಲಿ ಒತ್ತುವರಿಯಾಗಿರುವ ಕಂದಾಯ ಭೂಮಿಗಳನ್ನು ಹೊರತುಪಡಿಸಿದ ಗ್ರಾಮಪಂಚಾಯತಿಯ ಸ್ವತ್ತನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಲು ಸಂಬಂಧಪಟ್ಟ ಪ್ರಾಧಿಕಾರಗಳೊಂದಿಗೆ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

**58ಇ. ಸ್ವಚ್ಛ ಪರಿಸರವನ್ನು ಕಾಪಾಡುವ ಕರ್ತವ್ಯ.–** ಪ್ರತಿಯೊಂದು ಗ್ರಾಮಪಂಚಾಯತಿಯು,–

(ಎ) ಪಂಚಾಯತ್ ಪ್ರದೇಶದಲ್ಲಿ ಸ್ವಚ್ಛ ಪರಿಸರ ಕಾಪಾಡುವ ಉದ್ದೇಶಕ್ಕಾಗಿ ಆಹಾರ, ನೀರು ಮತ್ತು ಗ್ರಾಹಕರು ಬಳಸುವ ಇತರ ವಸ್ತುಗಳನ್ನು ಸರಬರಾಜು ಮಾಡುವುದರಲ್ಲಿ ನಿರತರಾಗಿರುವ ವ್ಯಕ್ತಿಗಳ ಅಥವಾ ಸಂಸ್ಥೆಗಳ ಚಟುವಟಿಕೆಗಳನ್ನು ಪರಿಶೀಲಿಸುವುದು ಮತ್ತು ನಿಯಂತ್ರಿಸುವುದು ;

(ಬಿ) ಬಯಲು ಬಹಿರ್ದೆಸೆ ಮುಕ್ತಗೊಳಿಸಿ ಮತ್ತು ತ್ಯಾಜ್ಯ ಮುಕ್ತವಾದ ಸ್ವಚ್ಛ ಪರಿಸರವನ್ನು ಉಂಟು ಮಾಡುವುದು;

– ಅದರ ಕರ್ತವ್ಯವಾಗಿರತಕ್ಕದ್ದು.

**58ಎಫ್. ಅಪಾಯಕಾರಿ ಕಲ್ಲು ಗಣಿಗಾರಿಕೆ, ಕೊಳವೆ ಬಾವಿಗಳನ್ನು, ತೆರೆದ ಬಾವಿಗಳನ್ನು ತೋಡುವುದು ಮತ್ತು ಹೊಂಡಗಳನ್ನು ನಿರ್ಮಿಸುವುದು.–** ನಿವಾಸಿಗಳಿಗೆ ತೊಂದರೆ ಆಗುವುದನ್ನು ಅಥವಾ ಅಪಾಯವನ್ನು ತಡೆಗಟ್ಟುವ ಸಲುವಾಗಿ ಕಲ್ಲುಗಣಿಗಾರಿಕೆ, ಕೊಳವೆ ಬಾವಿಗಳನ್ನು, ತೆರೆದ ಬಾವಿಗಳನ್ನು ಕೊರೆಯುವುದನ್ನು ಅಥವಾ ಹೊಂಡಗಳನ್ನು ನಿರ್ಮಿಸುವುದನ್ನು ತಡೆಗಟ್ಟುವುದು ಮತ್ತು ಸಂಬಂಧಪಟ್ಟ ಸರ್ಕಾರದ ಇಲಾಖೆಗಳ ಜೊತೆ ಸೇರಿ ಕ್ರಮಗಳನ್ನು ತೆಗೆದುಕೊಳ್ಳುವುದು ಪ್ರತಿಯೊಂದು ಗ್ರಾಮ ಪಂಚಾಯತ್‌ನ ಕರ್ತವ್ಯವಾಗಿರತಕ್ಕದ್ದು."

**25. 60ಎ ಮತ್ತು 60ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 60ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"60–ಎ. ಗುತ್ತಿಗೆಗಳನ್ನು ಮಾಡಿಕೊಳ್ಳಲು ವಿಧಾನ.–** (1) ಕಾಮಗಾರಿಗಳ ನಿರ್ವಹಣೆಗೆ ಅಥವಾ ಸರಕುಗಳು ಅಥವಾ ಸೇವೆಗಳನ್ನು ಒದಗಿಸುವುದಕ್ಕಾಗಿ ಗ್ರಾಮ ಪಂಚಾಯತ್ ಪರವಾಗಿ ಮಾಡಿಕೊಳ್ಳುವ ಪ್ರತಿಯೊಂದು ಗುತ್ತಿಗೆ ಅಥವಾ ಒಪ್ಪಂದವು ಈ ಪ್ರಕರಣ ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಉಪಬಂಧಗಳೊಂದಿಗೆ ಅನುಸಾರವಾಗಿರತಕ್ಕದ್ದು.

(2) ಪಂಚಾಯಿತಿಯ ಅಭಿವೃದ್ಧಿ ಅಧಿಕಾರಿಯು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ನಿಬಂಧನೆಗಳ ಮೇರೆಗೆ ಯಾವ ವಿಷಯಗಳಿಗೆ ಸಂಬಂಧಪಟ್ಟಂತೆ ಗ್ರಾಮಪಂಚಾಯತ್‌ನ ಪರವಾಗಿ ಗುತ್ತಿಗೆಯನ್ನು ಅಥವಾ ಒಪ್ಪಂದವನ್ನು ಮಾಡಿಕೊಳ್ಳಲು ಅಧಿಕಾರ ಹೊಂದಿರುವನೋ ಆ ವಿಷಯಗಳಿಗೆ ಸಂಬಂಧಪಟ್ಟಂತೆ ಗ್ರಾಮ ಪಂಚಾಯತ್‌ನ ಪರವಾಗಿ ಗುತ್ತಿಗೆಯನ್ನು ಅಥವಾ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು ಮತ್ತು ಸರ್ಕಾರವು ಕಾಲಕಾಲಕ್ಕೆ ಗುತ್ತಿಗೆಗೆ ಅಥವಾ ಒಪ್ಪಂದಕ್ಕೆ ಎಷ್ಟು ಮೌಲ್ಯದ ಹಣವನ್ನು ನಿಗದಿ ಮಾಡುತ್ತದೋ ಅಷ್ಟು ಹಣಕ್ಕೆ ನಿಯಮಿಸಬಹುದಾದ ಅಂಥ ಗುತ್ತಿಗೆಯನ್ನು ಮತ್ತು ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

**60ಬಿ. ಸಮುದಾಯಿಕ ಗುತ್ತಿಗೆಗಳು.–** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಗ್ರಾಮ ಪಂಚಾಯತಿಯು, ಗ್ರಾಮ ಸಭೆಯ ಶಿಫಾರಸ್ಸಿನ ಮೇಲೆ, ಪ್ರಥಮ ಆಯ್ಕೆಯಾಗಿ ಸರ್ಕಾರವು ನಿಗದಿಪಡಿಸಿದ ದರಗಳಲ್ಲಿ ಇಪ್ಪತ್ತು ಲಕ್ಷಗಳವರೆಗಿನ ಕಾಮಗಾರಿಗಳನ್ನು ಕೈಗೊಳ್ಳಲು ಮತ್ತು ಕಾರ್ಯಗತಗೊಳಿಸಲು, ಗ್ರಾಮ ಪಂಚಾಯತಿಗಳ ಅಂಥ ಕಾಮಗಾರಿಗಳನ್ನು ಕಾರ್ಯಗತಗೊಳಿಸಲು ಕಾಮಗಾರಿ ಮೌಲ್ಯದ ಶೇಕಡಾ ಹತ್ತಕ್ಕಿಂತ ಕಡಿಮೆಯಿಲ್ಲದಂತೆ ಕೊಡುಗೆ ನೀಡಿರುವ ಪಂಚಾಯತ್ ಪ್ರದೇಶದ ಒಳಗೆ ಫಲಾನುಭವಿಗಳ ಸ್ವ-ಸಹಾಯ ಸಮೂಹ ಹೊಂದಿರುವ ಯಾವುದೇ ನಿವಾಸಿಗಳ ಸಮೂಹಕ್ಕೆ ಪಂಚಾಯತಿಯ ಯಾವುದೇ ಕಾಮಗಾರಿಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ಅಥವಾ ಯಾವುದೇ ಸರಕುಗಳು ಅಥವಾ ಸೇವೆಗಳನ್ನು ಒದಗಿಸುವುದಕ್ಕಾಗಿ ಯಾವುದೇ ಗುತ್ತಿಗೆಯನ್ನು ನೀಡತಕ್ಕದ್ದು."

**26. 61ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 61ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"61. ಸ್ಥಾಯಿ ಸಮಿತಿಗಳು.–** (1) ಪ್ರತಿಯೊಂದು ಗ್ರಾಮ ಪಂಚಾಯತ್ ಸದಸ್ಯರಗಳು ಚುನಾಯಿಸಿದ ಸದಸ್ಯರನ್ನು ಒಳಗೊಂಡಿರುವ ಈ ಮುಂದಿನ ಸ್ಥಾಯಿ ಸಮಿತಿಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಕೃಷಿ ಉತ್ಪಾದನೆ, ಪಶುಸಂಗೋಪನೆ ಮತ್ತು ಗ್ರಾಮೀಣ ಕೈಗಾರಿಕೆಗಳು ಮತ್ತು ಬಡತನ ನಿರ್ಮೂಲನೆ ಕಾರ್ಯಕ್ರಮಗಳು, ಶಿಕ್ಷಣ, ಲೋಕೋಪಯೋಗಿ ಕಾಮಗಾರಿಗಳು ಮತ್ತು ಗ್ರಾಮಪಂಚಾಯತ್‌ನ ಇತರೆ ಪ್ರಕಾರ್ಯಗಳು, ಸಾರ್ವಜನಿಕ ಕಾಮಗಾರಿಗಳ ಮೇಲ್ವಿಚಾರಣೆ, ಮತ್ತು ಕಾಮಗಾರಿಗಳ ಕಳಪೆ ಗುಣಮಟ್ಟ ಕಾಮಗಾರಿಯ ನಿರ್ವಹಣೆಯಲ್ಲಿ ನಿಧಿಗಳ ಸಣ್ಣಪುಟ್ಟ ಕಳವು ಮತ್ತು ದುರ್ವಿನಿಯೋಗದ ಬಗ್ಗೆ ಗ್ರಾಮಸಭೆಯು ಎತ್ತುವ ದೂರುಗಳ ಮೇಲೆ ತನಿಖೆ ಮಾಡುವುದು ಮತ್ತು ವರದಿ ಮಾಡುವುದಕ್ಕಾಗಿ ಸಾಮಾನ್ಯ ಸ್ಥಾಯಿ ಸಮಿತಿ;

(ii) ಗ್ರಾಮಪಂಚಾಯತ್‌ಗಳ ಹಣಕಾಸು, ಆಯವ್ಯಯಗಳನ್ನು ರೂಪಿಸುವುದು, ರಾಜಸ್ವವನ್ನು ಹೆಚ್ಚಿಸುವುದಕ್ಕಾಗಿನ ಪ್ರಸ್ತಾವನೆಗಳ ಪರಿಶೀಲನೆ, ಸ್ವೀಕೃತಿ ಮತ್ತು ವೆಚ್ಚಗಳ ತಃಖ್ತೆಗಳ ಪರಿಶೀಲನೆ, ಗ್ರಾಮ ಪಂಚಾಯತಿಗಳ ಹಣಕಾಸಿಗೆ ಬಾಧಕವಾಗುವ ಎಲ್ಲಾ ಪ್ರಸ್ತಾವನೆಗಳನ್ನು ಪರಿಗಣಿಸುವುದು ಮತ್ತು ಗ್ರಾಮಪಂಚಾಯತ್‌ಗಳ ರಾಜಸ್ವ ಮತ್ತು ವೆಚ್ಚದ ಸಾಮಾನ್ಯ ಮೇಲ್ವಿಚಾರಣೆ ಮತ್ತು ಗ್ರಾಮಪಂಚಾಯತ್‌ನ ಯೋಜನೆಯ ಅಭಿವೃದ್ಧಿಗೆ ಸಂಬಂಧಿಸಿದ ಯಾವುದೇ ಇತರ ಕರ್ತವ್ಯ, ಮಾಹಿತಿ ಮತ್ತು ಅಂಕಿಅಂಶಗಳಿಗೆ ಸಂಬಂಧಿಸಿದ ಪ್ರಕಾರ್ಯಗಳನ್ನು ನಿರ್ವಹಿಸುವುದು ಹಣಕಾಸು, ಲೆಕ್ಕಪರಿಶೋಧನೆ ಮತ್ತು ಯೋಜನಾ ಸ್ಥಾಯೀ ಸಮಿತಿಯ ನಿರ್ವಹಿಸಬೇಕಾದ ಪ್ರಕಾರ್ಯಗಳಾಗಿರತಕ್ಕದ್ದು. ಪ್ರತಿಯೊಂದು ಗ್ರಾಮಪಂಚಾಯತಿಯು ಜನಗಣತಿ, ನಡೆಸಲಾದ ಸರ್ವೆಗಳು, ಪಿಆರ್‌ಎಗಳು ಮತ್ತು ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದ ದತ್ತಾಂಶಗಳು, ಪ್ರಗತಿಯಲ್ಲಿರುವ ಕೇಂದ್ರ ಮತ್ತು ರಾಜ್ಯ ಸರ್ಕಾರದ ಸ್ಕೀಮುಗಳು ವಿವರಗಳು, ಕೃಷಿ ಪದ್ಧತಿಗಳಿಗೆ ಸಂಬಂಧಿಸಿದ ದತ್ತಾಂಶ ಮತ್ತು ರೈತರಿಗೆ ಮುಖ್ಯವಾದ ಇತರ ಮಾಹಿತಿ, ಭೌತಿಕ ಮೂಲಸೌಕರ್ಯ ಸೂಚ್ಯಂಕಕ್ಕೆ ಸಂಬಂಧಿಸಿದ ದತ್ತಾಂಶ ಮತ್ತು ಸಾಮಾನ್ಯವಾಗಿ ಪಂಚಾಯತ್ ರಾಜ್ ಪದ್ಧತಿಗೆ ಸಂಬಂಧಿಸಿದ ಸ್ವತ್ತುಗಳು ಮತ್ತು ಸಂಪನ್ಮೂಲಗಳು ಹಾಗೂ ವಿಶೇಷವಾಗಿ ಗ್ರಾಮಪಂಚಾಯತ್‌ಗೆ ತಮ್ಮ ಯೋಜನೆಗಳು ಮತ್ತು ಆಯವ್ಯಯ ವೆಚ್ಚಗಳನ್ನು ಸುಗಮಗೊಳಿಸಲು ಗ್ರಾಮಪಂಚಾಯತ್‌ಗೆ ನೆರವು ನೀಡುವುದಕ್ಕೆ, ಸಂಬಂಧಿಸಿದ ದೂರದೃಷ್ಟಿತ್ವ ಮತ್ತು ವಾರ್ಷಿಕ ಯೋಜನೆಗಳು ಇವುಗಳನ್ನು ತಾಳೆ ನೋಡುವುದು ಮತ್ತು ಸಂಗ್ರಹಿಸತಕ್ಕದ್ದು.

(iii) ಸಾಮಾಜಿಕ ನ್ಯಾಯ ಸಮಿತಿಯು ಈ ಮುಂದಿನ ವಿಷಯಗಳಿಗೆ, ಎಂದರೆ .–

(ಎ) ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಇತರ ಹಿತಾಸಕ್ತಿಗಳಿಗೆ ಉತ್ತೇಜನ ನೀಡುವುದು ಮತ್ತು ಸಾಮಾಜಿಕವಾಗಿ ಅನ್ಯಾಯ ಆಗದಂತೆ ಮತ್ತು ಯಾವುದೇ ವಿಧವಾದ ಶೋಷಣೆ ಆಗದಂತೆ ಅಂತಹ ಜಾತಿಗಳು ಮತ್ತು ವರ್ಗಗಳನ್ನು ರಕ್ಷಿಸುವುದು;

(ಬಿ) ಮಹಿಳಾ ಮತ್ತು ಮಕ್ಕಳ ಕಲ್ಯಾಣ: ಸಾಮಾಜಿಕ ನ್ಯಾಯ ಸಮಿತಿಯು ಮಹಿಳೆಯರ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕವಾಗಿ ಅಭಿವೃದ್ಧಿಗೆ ಅನುವು ಮಾಡಿಕೊಟ್ಟು ಮಹಿಳಾ ಸಬಲೀಕರಣದಂಥ ಮಹಿಳೆಯರಿಗೆ ಸಂಬಂಧಪಡುವ ಹಿತಾಸಕ್ತಿಗಳನ್ನು ಮತ್ತು ವಿಷಯಗಳನ್ನು ಪರಾಮರ್ಶಿಸತಕ್ಕದ್ದು ಮತ್ತು ಗ್ರಾಮ ಪಂಚಾಯತ್ ಪ್ರದೇಶದಲ್ಲಿ ಇರುವ ಮಹಿಳೆಯರಿಗೆ ಕೌಟುಂಬಿಕ ಹಿಂಸೆ ಮತ್ತು ಲೈಂಗಿಕ ಕಿರುಕುಳಗಳಂಥ ಮುಂತಾದ ಅಪರಾಧಗಳ ವಿರುದ್ಧ ರಕ್ಷಣೆ ಒದಗಿಸತಕ್ಕದ್ದು. ಸಾಮಾಜಿಕ ನ್ಯಾಯ ಸಮಿತಿಯ ಪ್ರಕಾರ್ಯಗಳು ಮಹಿಳೆಯರಿಗೆ ಶಾಲೆಗಳಲ್ಲಿ, ಕಛೇರಿಗಳಲ್ಲಿ, ಕಾರ್ಖಾನೆಗಳಲ್ಲಿ, ಆಸ್ಪತ್ರೆಗಳಲ್ಲಿ ಮತ್ತು ಇತರ ಸಾರ್ವಜನಿಕ ಸ್ಥಳಗಳಲ್ಲಿ ಸಾಕಷ್ಟು ಅನುಕೂಲಗಳನ್ನು ಮತ್ತು ಅವರ ನಿತ್ಯ ಜೀವನದಲ್ಲಿ ಸ್ವಾತಂತ್ರ್ಯ ಮತ್ತು ಘನತೆಯನ್ನು ಖಚಿತಪಡಿಸಿಕೊಳ್ಳುವ ಮೂಲಕ ಪಂಚಾಯತಿಗೆ ಸಲಹೆ ನೀಡುವುದನ್ನು ಒಳಗೊಳ್ಳತಕ್ಕದ್ದು:

ಪರಂತು, ಸಾಮಾಜಿಕ ನ್ಯಾಯ ಸಮಿತಿಯಲ್ಲಿ ಕಡೇ ಪಕ್ಷ ಒಬ್ಬರು ಮಹಿಳಾ ಸದಸ್ಯರು ಇರತಕ್ಕದ್ದು ಮತ್ತು ಚುನಾಯಿತ, ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಪೈಕಿ ಅನುಸೂಚಿತ ಜಾತಿ ಸದಸ್ಯರ ಸಂಖ್ಯೆ ಹೆಚ್ಚಿಗೆ ಇದ್ದರೆ, ಆ ಅನುಸೂಚಿತ ಜಾತಿ ಪೈಕಿ ಒಬ್ಬರು ಅಥವಾ ಅನುಸೂಚಿತ ಪಂಗಡದವರ ಸದಸ್ಯರ ಸಂಖ್ಯೆ ಹೆಚ್ಚಿಗೆ ಇದ್ದರೆ, ಅನುಸೂಚಿತ ಪಂಗಡದ

ಪೈಕಿ ಒಬ್ಬರು ಸದಸ್ಯರು ಈ ಸಮಿತಿಯಲ್ಲಿ ಇರತಕ್ಕದ್ದು. ಸಾಮಾಜಿಕ ನ್ಯಾಯ ಸಮಿತಿಯು ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಗಳ ಚುನಾಯಿತ ಸದಸ್ಯರ ಪೈಕಿ ಒಬ್ಬರನ್ನು ಸಮಿತಿಯ ಅಧ್ಯಕ್ಷರನ್ನಾಗಿ ಚುನಾಯಿಸತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಹೇಳಲಾದ ಸಮಿತಿಯು, ವೆಬ್ ವಿನ್ಯಾಸಗೊಳಿಸಲು ಮತ್ತು ಎಲೆಕ್ಟ್ರಾನಿಕ್ ಪೋರ್ಟ್‌ಲ್‌ಗಳನ್ನು ಸ್ಥಾಪಿಸಲು ಮತ್ತು ನಿರ್ವಹಿಸಲು ಗೊತ್ತಿರುವ ಒಬ್ಬರು ಅಥವಾ ಇಬ್ಬರು ಕಂಪ್ಯೂಟರ್ ಟೆಕ್ನೀಷನ್‌ಗಳನ್ನು ಸಹ ಸದಸ್ಯನನ್ನಾಗಿ ಸೇರಿಸಿಕೊಳ್ಳಲು ಅಧಿಕಾರವನ್ನು ಹೊಂದಿರತಕ್ಕದ್ದು.

(3) ಗ್ರಾಮ ಪಂಚಾಯಿತಿಯ ಅಧ್ಯಕ್ಷ, ಹಣಕಾಸು, ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸ್ಥಾಯಿ ಸಮಿತಿಯ ಪದನಿಮಿತ್ತ ಛೇರ್ಮನಾಗಿರತಕ್ಕದ್ದು. ಉಪಾಧ್ಯಕ್ಷನು ಸಾಮಾನ್ಯ ಸ್ಥಾಯಿ ಸಮಿತಿಯ ಛೇರ್ಮನಾಗಿರತಕ್ಕದ್ದು.

(4) ಸ್ಥಾಯಿ ಸಮಿತಿಯ ಸದಸ್ಯರ ಚುನಾವಣೆಯನ್ನು ಗ್ರಾಮಪಂಚಾಯತ್ ಸದಸ್ಯರ ಸಾಮಾನ್ಯ ಚುನಾವಣೆಯ ತರುವಾಯ ಅಥವಾ ಈ ಅಧಿನಿಯಮದ ಅಡಿಯಲ್ಲಿ ಇದರ ಪುನಾರಚನೆ ಅಥವಾ ಸ್ಥಾಪನೆಯಾದಾಗ ಆದಷ್ಟು ಬೇಗನೆ ಅಥವಾ ಸ್ಥಾಯಿ ಸಮಿತಿಯ ಸದಸ್ಯರ ಪದಾವಧಿಯು ಮುಕ್ತಾಯವಾಗುವ ನಿಕಟಪೂರ್ವದಲ್ಲಿ ನಡೆಸತಕ್ಕದ್ದು.

(5) ಪದನಿಮಿತ್ತ ಚೇರ್ಮನ್‌ನನ್ನು ಹೊರತುಪಡಿಸಿ, ಸ್ಥಾಯಿ ಸಮಿತಿಯ ಪ್ರತಿಯೊಬ್ಬ ಸದಸ್ಯನ ಪದಾವಧಿಯು, ಚುನಾವಣೆಯ ದಿನಾಂಕದಿಂದ ಮೂವತ್ತು ತಿಂಗಳುಗಳ ಅಥವಾ ಆತನು ಗ್ರಾಮಪಂಚಾಯತ್‌ನ ಸದಸ್ಯನಾಗಿರುವುದು ಸ್ಥಗಿತಗೊಳ್ಳುವವರೆಗೂ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ಇರತಕ್ಕದ್ದು.

(6) (ಎ) ಪ್ರತಿಯೊಂದು ಸಮಿತಿಯು ಅಧ್ಯಕ್ಷ ಮತ್ತು ಸಂದರ್ಭಾನುಸಾರವಾಗಿ ಉಪಾಧ್ಯಕ್ಷನು ಒಳಗೊಂಡಂತೆ ಮೂರಕ್ಕಿಂತ ಕಡಿಮೆಯಲ್ಲದ ಮತ್ತು ಐದಕ್ಕಿಂದ ಹೆಚ್ಚಲ್ಲದ ಸದಸ್ಯರನ್ನು ಒಳಗೊಂಡಿರತಕ್ಕದ್ದು.

(ಬಿ) ಪ್ರತಿಯೊಂದು ಸಮಿತಿಯು, ರೈತರ ಕ್ಲಬ್‌ಗಳ, ಮಹಿಳಾ ಮಂಡಳಗಳ, ಯುವ ಮಂಡಳಗಳ ಮತ್ತು ಸರ್ಕಾರವು ಗುರುತಿಸಲಾದ ಇತರ ಅಂತಹುದೇ ನಿಕಾಯಗಳ ಸದಸ್ಯರನ್ನು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಸಹಸದಸ್ಯರನ್ನಾಗಿ ಮಾಡಿಕೊಳ್ಳಲು ಸಕ್ಷಮವಾಗಿರತಕ್ಕದ್ದು. ಪಂಚಾಯತ್ ಪ್ರದೇಶದಲ್ಲಿ ಸಹಕಾರ ಸಂಘಗಳ ಪ್ರತಿನಿಧಿಯು ಸ್ಥಾಯಿಸಮಿತಿಗೆ ಸಹಸದಸ್ಯನಾಗತಕ್ಕದ್ದು. ಸಹಸದಸ್ಯನ ಹಕ್ಕುಗಳ ಮತ್ತು ಹೊಣೆಗಾರಿಕೆಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

(7) ಸ್ಥಾಯೀ ಸಮಿತಿಗಳು, ಗ್ರಾಮಪಂಚಾಯತ್‌ಗಳು ತಮಗೆ ಪ್ರತ್ಯಾಯೋಜಿಸಿದ ಅಧಿಕಾರಗಳಷ್ಟರ ಮಟ್ಟಿಗೆ ಮೇಲೆ ಉಲ್ಲೇಖಿಸಲಾದ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು."

**27. 64ನೇ ಪ್ರಕರಣದ ತಿದ್ದುಪಡಿ,–** ಮೂಲ ಅಧಿನಿಯಮದ 64ನೇ ಪ್ರಕರಣದಲ್ಲಿ ,–

(ಎ) (1)ನೇ ಉಪಪ್ರಕರಣದಲ್ಲಿ, **"ಅಥವಾ ಅಸ್ತಿತ್ವದಲ್ಲಿರುವ ಯಾವುದೇ ಕಟ್ಟಡವನ್ನು ಬದಲಾಯಿಸತಕ್ಕದ್ದಲ್ಲ ಅಥವಾ"** ಎಂಬ ಪದಗಳ ತರುವಾಯ **"ಅಥವಾ ಜಾಹೀರಾತು ಫಲಕಗಳನ್ನು ನಿಲ್ಲಿಸಲು ಅಥವಾ ಆವರಣಗಳ ಒಳಗೆ ಖಾಲಿ ಇರುವ ಯಾವುದೇ ಜಾಗದಲ್ಲಿ ಅಥವಾ ಆ ಸ್ಥಳಕ್ಕೆ ಹೊಂದಿಕೊಂಡಿರುವ ಮೊಬೈಲ್ ಟವರ್‌ಗಳನ್ನು ಸ್ಥಾಪಿಸಲು"** ಎಂಬ ಪದಗಳನ್ನು ಸೇರಿಸತಕ್ಕದ್ದು.

(ಬಿ) (5)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(5ಎ) ಗ್ರಾಮಪಂಚಾಯತ್‌ಗಳು, ಕಟ್ಟಡದ ಲೈಸೆನ್ಸು ಅಥವಾ ವಸತಿ ಅಥವಾ ವಾಸಸ್ಥಳಗಳ ಲೇಔಟ್‌ಗಳ ಅನುಮೋದನೆಗಳನ್ನು ನೀಡುವ ವಿಷಯದಲ್ಲಿ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ ಉಪಬಂಧಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು. ಯಾವುದೇ ಅನುಮೋದನೆಯು ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ ಉಪಬಂಧಗಳ ಯಾವುದೇ ಉಲ್ಲಂಘನೆಯು "ದುರ್ನಡತೆ" ಯೆಂದು ಅರ್ಥೈಸತಕ್ಕದ್ದು ಮತ್ತು ಅದಕ್ಕಾಗಿ ಸಂಬಂಧಪಟ್ಟ ಅಧಿಕಾರಿ ಅಥವಾ ಸಿಬ್ಬಂದಿಯು ಶಿಸ್ತುಕ್ರಮಕ್ಕೆ ಹೊಣೆಗಾರನಾಗತಕ್ಕದ್ದು."

**28. 70ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 70ನೇ ಪ್ರಕರಣದ (2)ನೇ ಉಪ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

"(2ಎ) ಈ ಅಧಿನಿಯಮದಲ್ಲಿ ಉಪಬಂಧಿಸಿದುದನ್ನು ಉಳಿದು, ಈ ಅಧಿನಿಯಮ ಅಥವಾ ಅದರಡಿಯಲ್ಲಿನ ನಿಯಮ, ಉಪವಿಧಿ ಅಥವಾ ವಿಷಯಗಳಡಿಯಲ್ಲಿ ಲೈಸೆನ್ಸ್ ಅಥವಾ ಅನುಮತಿಗಾಗಿನ ಅಥವಾ ಅದರ ನವೀಕರಣಕ್ಕಾಗಿನ ಪ್ರತಿಯೊಂದು ಅರ್ಜಿಯನ್ನು ಅಗತ್ಯವಾದ ಲೈಸೆನ್ಸು ಅಥವಾ ಅನುಮತಿಯು ಜಾರಿಯಾಗುವ ದಿನಾಂಕದಿಂದ ಅಥವಾ ಅವಧಿಯ (ಒಂದು ವರ್ಷ ಅಥವಾ ಅರ್ಜಿಯಲ್ಲಿ ಹೇಳಲಾದ ಅವಧಿಗಿಂತ ಅಂಥ ಕಡಿಮೆ ಅವಧಿ) ಆದಷ್ಟು ಮೊದಲು ಮೂವತ್ತು ದಿನಗಳಿಗಿಂತ ಕಡಿಮೆಯಲ್ಲಿ ಮತ್ತು ತೊಂಬತ್ತು ದಿನಗಳಿಗಿಂತ ಹೆಚ್ಚಲ್ಲದಂಥ ಅವಧಿಯಲ್ಲಿ ಸಲ್ಲಿಸತಕ್ಕದ್ದು.

(2ಬಿ) ಪ್ರತಿಯೊಂದು ಲೈಸೆನ್ಸು ಅಥವಾ ಅನುಮತಿಗಾಗಿ ಅಂಥ ಯೂನಿಟ್ಟುಗಳ ಮೇಲೆ ಗ್ರಾಮ ಪಂಚಾಯತ್ ನಿಗದಿಪಡಿಸಬಹುದಾದಂತೆ ನಿಯಮಿಸಲಾದ ಗರಿಷ್ಠಕ್ಕೆ ಮೀರದಂಥ ದರಗಳಲ್ಲಿ ಶುಲ್ಕವನ್ನು ಚಾರ್ಜು ಮಾಡಬಹುದು:

ಪರಂತು ಹೋರ್ಡಿಂಗ್‌ನ ಪ್ರತಿಯೊಂದು ಲೈಸೆನ್ಸಗೆ, ಅನುಸೂಚಿ-IVರಲ್ಲಿ ನಿರ್ದಿಷ್ಟಪಡಿಸಬಹುದಾಂಥ ದರಗಳಲ್ಲಿ ಶುಲ್ಕವನ್ನು ಚಾರ್ಜು ಮಾಡತಕ್ಕದ್ದು.

(2ಸಿ) (2ಎ) ಉಪ ಪ್ರಕರಣದ ಅಡಿಯಲ್ಲಿನ ಅರ್ಜಿಯ ಮೇಲಿನ ಆದೇಶಗಳನ್ನು ಅರವತ್ತು ದಿನಗಳೊಳಗೆ ಅರ್ಜಿದಾರನಿಗೆ ತಿಳಿಸಲಾಗದಿದ್ದಲ್ಲಿ, ಅದು ಸಾಮಾನ್ಯವಾಗಿ ಮಂಜೂರು ಮಾಡುವ, ಅವಧಿಗಾಗಿ, ಯಾವುದಾದರೂ ಇದ್ದಲ್ಲಿ, ಸಾಮಾನ್ಯವಾಗಿ ವಿಧಿಸುವಂತಹ ಷರತ್ತುಗಳಿಗೆ ಒಳಪಟ್ಟು ಅರ್ಜಿಯನ್ನು ಮಂಜೂರು ಮಾಡಲಾಗಿದೆಯೆಂದು ಭಾವಿಸತಕ್ಕದ್ದು :

ಪರಂತು, ಚುನಾವಣೆಯ ಸಮಯದಲ್ಲಿ ಅಥವಾ ಅನ್ಯಥಾ ಅರ್ಜಿಯನ್ನು ಪರಿಷ್ಕರಿಸಲಾಗದಿದ್ದಲ್ಲಿ ಅರ್ಜಿಯ ಆದೇಶವನ್ನು ತೊಂಬತ್ತು ದಿನಗಳ ಅವಧಿಯಲ್ಲಿ ತಿಳಿಸತಕ್ಕದ್ದು.

(2ಡಿ) (2ಸಿ) ಉಪ ಪ್ರಕರಣದ ಅಡಿಯಲ್ಲಿ ಭಾವಿತ ಮಂಜೂರಾತಿಯ ಆದೇಶವನ್ನು ಹೊರಡಿಸಿದಲ್ಲಿ ಮತ್ತು ಸಂಬಂಧಪಟ್ಟ ಅಧ್ಯಕ್ಷ ಮತ್ತು ಪಂಚಾಯತ್ ಅಭಿವೃದ್ಧಿ ಅಧಿಕಾರಿಯು ಅಂಥ ಆದೇಶವನ್ನು ಹೊರಡಿಸುವುದಕ್ಕೆ ಜವಾಬ್ದಾರನಾಗಿದ್ದಲ್ಲಿ ಅದನ್ನು

ದುರ್ನಡತೆ ಎಂದು ಪರಿಗಣಿಸತಕ್ಕದ್ದು ಮತ್ತು 48ನೇ ಪ್ರಕರಣದ ಅಡಿಯಲ್ಲಿ ಅಧ್ಯಕ್ಷನ ಮೇಲೆ ಕ್ರಮ ಜರುಗಿಸತಕ್ಕದ್ದು ಮತ್ತು ಪಂಚಾಯತ್ ಅಭಿವೃದ್ಧಿ ಅಧಿಕಾರಿಯ ಮೇಲೆ ಆತನಿಗೆ ಅನ್ವಯವಾಗುವ ಸಂಬಂಧಪಟ್ಟ ಸೇವಾ ಕಾನೂನಿನ ಅಡಿಯಲ್ಲಿ ಕ್ರಮ ಜರುಗಿಸತಕ್ಕದ್ದು"

(2ಇ) ಯಾವುದೇ ಅಂಥ ಲೈಸೆನ್ಸ್ ಅಥವಾ ಅನುಮತಿಗಾಗಿ ಶುಲ್ಕದ ಪೂರ್ವ–ಸಂದಾಯ ಸ್ವೀಕೃತಿಯು ಲೈಸೆನ್ಸು ಅಥವಾ ಅನುಮತಿಯ ಅಂಥ ಪೂರ್ವ ಸಂದಾಯವನ್ನು ಮಾಡುವುದಕ್ಕೆ ವ್ಯಕ್ತಿಯು ಅರ್ಹನಾಗತಕ್ಕದ್ದಲ್ಲ, ಆದರೆ ಲೈಸೆನ್ಸು ಅಥವಾ ಅನುಮತಿಯನ್ನು ತಿರಸ್ಕರಿಸಿದ ಸಂದರ್ಭದಲ್ಲಿ ಶುಲ್ಕವನ್ನು ಮರು ಪಾವತಿಸುವುದಕ್ಕೆ ಮಾತ್ರ ಅರ್ಹನಾಗತಕ್ಕದ್ದು.

(2ಎಫ್) ಯಾವುದೇ ಅಂಥ ಲೈಸೆನ್ಸ್ ಅಥವಾ ಅನುಮತಿಯು ಅವಶ್ಯವಾಗಿರುವ ಒಂದು ಕಾರ್ಯವನ್ನು ಅಂಥ ಲೈಸೆನ್ಸು ಅಥವಾ ಅನುಮತಿಯಿಲ್ಲದೇ ಅಥವಾ ಪಡೆಯಲಾದ ಲೈಸೆನ್ಸು ಅಥವಾ ಅನುಮತಿಯ ಷರತ್ತುಗಳಿಗೆ ಅಸಂಗತವಾದ ವಿಧಾನದಲ್ಲಿ ಮಾಡಲಾಗಿದ್ದಲ್ಲಿ, ಗ್ರಾಮ ಪಂಚಾಯಿತಿಯ ಲೈಸೆನ್ಸು ಪ್ರಾಧಿಕಾರವು ನೋಟೀಸಿನ ಮೂಲಕ, ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಸಮಯದೊಳಗೆ ಅದರಿಂದ ಬಾಧಿತವಾದ ಚರ ಅಥವಾ ಸ್ಥಿರ, ಸಾರ್ವಜನಿಕ ಅಥವಾ ಖಾಸಗಿಯ ಯಾವುದೇ ಸ್ವತ್ತಿನ ಪೂರ್ಣ ಅಥವಾ ಯಾವುದೇ ಭಾಗವನ್ನು ಬದಲಾಯಿಸುವಂತೆ, ತೆಗೆದುಹಾಕುವಂತೆ ಅಥವಾ ಸಾಧ್ಯವಾದಷ್ಟು ಅದನ್ನು ಅದರ ಮೂಲ ಸ್ವರೂಪಕ್ಕೆ ತರುವಂತೆ ಆ ವ್ಯಕ್ತಿಗೆ ಅಗತ್ಯಪಡಿಸಬಹುದು."

**29. 110ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 110ನೇ ಪ್ರಕರಣದಲ್ಲಿ, "ಅಪರಾಧ ನಿರ್ಣಯ ಆದ ತರುವಾಯ ಒಂದು ನೂರು ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆ ದಂಡನೆಗೆ ಗುರಿಯಾಗತಕ್ಕದ್ದು" ಎಂಬ ಪದಗಳಿಗೆ ಬದಲಾಗಿ "ಗ್ರಾಮ ಪಂಚಾಯತ್‌ಗೆ ಐದು ನೂರು ರೂಪಾಯಿಗಳ ಆಡಳಿತಾತ್ಮಕ ವೆಚ್ಚವನ್ನು ಸಂದಾಯ ಮಾಡತಕ್ಕದ್ದು." ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**30. IVಎ ಅಧ್ಯಾಯದ ಸೇರ್ಪಡೆ.–** ಮೂಲ ಅಧಿನಿಯಮದ IVನೇ ಅಧ್ಯಾಯದ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"ಅಧ್ಯಾಯ IV ಎ**

**ಪಂಚಾಯತ್ ಸದಸ್ಯರ ಕರ್ತವ್ಯಗಳು ಮತ್ತು ಜವಾಬ್ದಾರಿಗಳು**

**110ಎ. ಪಂಚಾಯತ್ ಸದಸ್ಯರ ಕರ್ತವ್ಯಗಳು ಮತ್ತು ಜವಾಬ್ದಾರಿಗಳು.–**ಪಂಚಾಯತ್‌ನ ಪ್ರತಿಯೊಬ್ಬ ಸದಸ್ಯನು ಈ ಮುಂದಿನ ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಹೊಂದಿರತಕ್ಕದ್ದು, ಎಂದರೆ:–

(ಎ) ಪಂಚಾಯಿತಿಯ ಪ್ರತಿಯೊಂದು ವರ್ಗ ಮತ್ತು ಸ್ಥಳೀಯ ಮತದಾನ ಕ್ಷೇತ್ರಗಳ ಹಿತಾಸಕ್ತಿಗಳನ್ನು ಪರಿಣಾಮಕಾರಿಯಾಗಿ ಪ್ರತಿನಿಧಿಸುವುದು;

(ಬಿ) ಪಂಚಾಯಿತಿಯ ನಿವಾಸಿಯು ಮಾಡಿದ ವಿಚಾರಣೆಗಳಿಗೆ ಮತ್ತು ಮನವಿಗಳಿಗೆ ನ್ಯಾಯಯುತವಾಗಿ ಮತ್ತು ನಿಷ್ಪಕ್ಷಪಾತವಾಗಿ ಪ್ರತಿಕ್ರಿಯಿಸುವುದು;

(ಸಿ) ಸಮುದಾಯದ ಅಭಿಪ್ರಾಯಗಳನ್ನು ಪ್ರತಿನಿಧಿಸುವ ಮೂಲಕ ಸಮುದಾಯ ಮುಂದಾಳತ್ವವನ್ನು ಕಲ್ಪಿಸುವುದು;

(ಡಿ) ನಡತೆ ಮತ್ತು ನೈತಿಕತೆಯ ಗರಿಷ್ಠ ಗುಣಮಟ್ಟವನ್ನು ನಿರ್ವಹಿಸುವುದು;

(ಇ) ಸಾರ್ವಜನಿಕ ಹಿತಾಸಕ್ತಿಯಲ್ಲಿ ಮಾತ್ರವೇ ಸೇವೆ ಮಾಡುವುದು ಮತ್ತು ಯಾವುದೇ ವ್ಯಕ್ತಿಯ ಅನುಕೂಲ ಅಥವಾ ಅನಾನುಕೂಲವನ್ನು ಪ್ರದಾನ ಮಾಡುವಲ್ಲಿ ಬೇಧಭಾವ ತೋರಿಸಬಾರದು;

(ಎಫ್) ಯಾವುದೇ ವ್ಯಕ್ತಿಯ ವಿರುದ್ಧ ಬೇಧಭಾವ ತೋರದೇ ಸಮಾನತೆಯನ್ನು ಪ್ರೋತ್ಸಾಹಿಸುವುದು ಮತ್ತು ಅವರ ಮತ, ವಯಸ್ಸು, ಧರ್ಮ, ಲಿಂಗ ಅಥವಾ ಅಸಮರ್ಥತೆಯನ್ನು ಪರಿಗಣಿಸದೆ (regardless) ಅವರನ್ನು ಗೌರವದಿಂದ ಕಾಣುವುದು;

(ಜಿ) ಜನರಿಗೆ ಅವರು ಅರ್ಹನಾಗಿರುವ ಮಾಹಿತಿಯನ್ನು ಪಡೆಯುವುದಕ್ಕೆ ಅವಕಾಶವನ್ನು ಕಲ್ಪಿಸುವುದು;

(ಎಚ್) ಯಾವುದೇ ವಿಷಯದಲ್ಲಿ ಆತನು ಹಣಕಾಸಿನ (pecuniary) ಆಸಕ್ತಿಯನ್ನು ಹೊಂದಿರುವಾಗ ಆತನನ್ನು ಯಾವುದೇ ಚರ್ಚೆ ಅಥವಾ ಮತದಾನದಲ್ಲಿ ಭಾಗವಹಿಸುವುದರಿಂದ ಅಂಥ ವಿಷಯದ ಪರಿಗಣನೆಯಲ್ಲಿ ಸಭೆಯಿಂದ ಹಿಂತೆಗೆದುಕೊಳ್ಳುವಲ್ಲಿ ಸ್ವಯಂ ನಿಯಂತ್ರಣ ಹೊಂದುವುದು;

(ಐ) ಆದ್ಯತೆಗಳು ಮತ್ತು ಗುರಿಗಳನ್ನು ಸಾಧಿಸುವಲ್ಲಿ ಪಂಚಾಯತ್‌ನ ಕಾರ್ಯ ನಿರ್ವಹಣೆಯನ್ನು ಪರಿಶೀಲಿಸುವುದು.

(ಜೆ) ಸರ್ಕಾರವು ಮಾಡಿದ ಆದ್ಯತೆಗಳನ್ನು ನಿರ್ವಹಿಸುವುದು ಮತ್ತು ಸ್ಥಳೀಯ ಸಂದರ್ಭದಲ್ಲಿ ಆ ಆದ್ಯತೆಗಳನ್ನು ಎಷ್ಟು ಅತ್ಯುತ್ತಮವಾಗಿ ನೀಡಬಹುದು ಎಂಬುದನ್ನು ತೀರ್ಮಾನಿಸುವುದು;

(ಕೆ) ಪ್ರದೇಶದ ಉತ್ತಮ ಆಡಳಿತದಲ್ಲಿ ಭಾಗವಹಿಸುವುದು ಮತ್ತು ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ಪಂಚಾಯಿತಿ ನಿವಾಸಿಗಳ ಪಾಲ್ಗೊಳ್ಳುವಿಕೆಯನ್ನು ಸಕ್ರಿಯವಾಗಿ ಪ್ರೋತ್ಸಾಹಿಸುವುದು."

**31. Vನೇ ಅಧ್ಯಾಯದ ಶೀರ್ಷಿಕೆಯ ತಿದ್ದುಪಡಿ.–** ಮೂಲ ಅಧಿನಿಯಮದ Vನೇ ಅಧ್ಯಾಯದಲ್ಲಿ "ಗ್ರಾಮ ಪಂಚಾಯಿತಿಯ ಸಿಬ್ಬಂದಿ" ಎಂಬ ಪದಗಳ ತರುವಾಯ "ಮತ್ತು ಕರ್ನಾಟಕ ಪಂಚಾಯತ್ ಆಡಳಿತಾತ್ಮಕ ಸೇವೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

**32. 119ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 119ನೇ ಪ್ರಕರಣದಲ್ಲಿ, (1)ನೇ ಉಪ–ಪ್ರಕರಣದ ಪರಂತುಕದಲ್ಲಿ, **"ಶಾಲೆಗಳು"** ಎಂಬ ಪದದ ತರುವಾಯ, ",ಆಸ್ಪತ್ರೆಗಳು" ಎಂಬ ಪದವನ್ನು ಹಾಗೂ ಒಂದು ಅಲ್ಪವಿರಾಮ ಚಿಹ್ನೆಯನ್ನು ಸೇರಿಸತಕ್ಕದ್ದು.

**33. 120ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 120ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ, (iv)ನೇ ಖಂಡದಲ್ಲಿ, "ಐದನೆಯ ಒಂದರಷ್ಟು" ಎಂಬ ಪದಗಳ ತರುವಾಯ ",ಈ ಪೈಕಿ ಒಬ್ಬರು ಮಹಿಳೆ ಇರತಕ್ಕದ್ದು ಮತ್ತು ಅನುಸೂಚಿತ

ಜಾತಿಗಳಿಂದ ಮತ್ತು ಅನುಸೂಚಿತ ಪಂಗಡಗಳಿಂದ ಒಬ್ಬೊಬ್ಬರಂತೆ" ಎಂಬ ಪದಗಳನ್ನು ಮತ್ತು ಅಲ್ಪವಿರಾಮ ಚಿಹ್ನೆಯನ್ನು ಸೇರಿಸತಕ್ಕದ್ದು.

**34. 121ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 121ನೇ ಪ್ರಕರಣದಲ್ಲಿ "ಜನಸಂಖ್ಯೆಯ ಹತ್ತು ಸಾವಿರಕ್ಕೆ" ಎಂಬ ಪದಗಳಿಗೆ **"ಪ್ರತಿ ಹನ್ನೆರಡು ಸಾವಿರದ ಐದುನೂರು ಮತ್ತು ಹದಿನೈದು ಸಾವಿರ ಈ ನಡುವಣ ಜನಸಂಖ್ಯೆಗೆ"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**35. 136ನೇ ಪ್ರಕರಣದ ತಿದ್ದುಪಡಿ.–**ಮೂಲ ಅಧಿನಿಯಮದ 136ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ,–

**"136. ಸದಸ್ಯರನ್ನು ತೆಗೆದುಹಾಕುವುದು.–** (1) ತಾಲ್ಲೂಕು ಪಂಚಾಯತ್‌ನ ಯಾರೇ ಸದಸ್ಯನು,–

(i) ಆತನು ತನ್ನ ಕರ್ತವ್ಯಗಳನ್ನು ನಿರ್ವಹಣೆ ಮಾಡುವಾಗ ದುರ್ನಡತೆಯ ಅಥವಾ/ ಯಾವುದೇ ಅಪಮಾನಕರ ನಡತೆಯ ತಪ್ಪಿತಸ್ಥನಾಗಿದ್ದರೆ,

(ii) ಸದಸ್ಯನಾಗಿ ತನ್ನ ಕರ್ತವ್ಯಗಳ ನಿರ್ವಹಣೆ ಮಾಡಲು ಅಸಮರ್ಥನಾದರೆ ಅಥವಾ, ಆತನು ಕರ್ತವ್ಯಗಳ ನಿರ್ವಹಣೆ ಮಾಡುವಾಗ ನಿರಂತರವಾಗಿ ಅಜಾಗರೂಕರಾಗಿದ್ದರೆ;

(ಎ) ಜಿಲ್ಲಾ ವೈದ್ಯಾಧಿಕಾರಿಯು ಪ್ರಮಾಣೀಕರಿಸಬಹುದಾದಂತೆ ಹುದ್ದೆಯನ್ನು ಹೊಂದಲು ವೈದ್ಯಕೀಯವಾಗಿ ಅನರ್ಹನಾಗಿರುವ ಸಂದರ್ಭದಲ್ಲಿ,

(ಬಿ) ದಿವಾಳಿ ಅಥವಾ ಅಸ್ವಸ್ಥ ಚಿತ್ತದವನಾಗಿದ್ದ ಪರಿಣಾಮವಾಗಿ;

(iii) ಪಂಚಾಯತ್‌ನ ಒಂದಾದ ಮೇಲೊಂದರಂತೆ ಅನುಕ್ರಮವಾಗಿ ಬರುವ ನಾಲ್ಕು ಸಭೆಗಳಿಗೆ ಹಾಜರಾಗಲು ತಪ್ಪಿದರೆ ಮತ್ತು ಅಧ್ಯಕ್ಷನಾಗಲಿ ಅಥವಾ ಉಪಾಧ್ಯಕ್ಷನಾಗಲಿ ಪಂಚಾಯತ್‌ನ ಸಭೆಯನ್ನು ಕರೆಯಬೇಕಿದ್ದಾಗ ಅಥವಾ ಕರೆಯುವ ಅವಶ್ಯಕತೆ ಇದ್ದಾಗ ಒಂದಾದ ಮೇಲೊಂದರಂತೆ ಅನುಕ್ರಮವಾಗಿ ಬರುವ ಎರಡು ಸಭೆಗಳನ್ನು ಕರೆಯಲು ತಪ್ಪಿದರೆ; ಅಥವಾ

(iv) ಚುನಾವಣೆ ಸಂದರ್ಭದಲ್ಲಿ ಪರಿಗಣನೆಗಾಗಿ ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಪಂಚಾಯತಿಯ ಸದಸ್ಯ ಅಥವಾ ಅಧ್ಯಕ್ಷ ಅಥವಾ ಉಪಾಧ್ಯಕ್ಷರ ಹುದ್ದೆಯ ವ್ಯಾಪಾರಕ್ಕಾಗಿ ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಪಂಚಾಯತಿಯ ಯಾವುದೇ ಮತದಾರ ಅಥವಾ ಸದಸ್ಯನನ್ನು ಸೆಳೆಯುವುದು ಅಥವಾ ದಬ್ಬಾಳಿಕೆ ಅಥವಾ ವಂಚನೆ ಮಾಡಿದ್ದಾನೆಂದು;

(v) ಪಂಚಾಯತ್‌ನ ಯಾವುದೇ ಕಾಮಗಾರಿಯು ಗುತ್ತಿಗೆ ಜನ್ಯವಾದುದಾಗಿರಬಹುದು ಅಥವಾ ಬೇರೆಯ ರೀತಿಯದಾಗಿರಬಹುದು. ಆ ಯಾವುದೇ ಕಾಮಗಾರಿಯ ನಿರ್ವಹಣೆ ಮಾಡುವಾಗ ಪಾಲುದಾರನಾಗಿ, ನೌಕರನಾಗಿ ಅಥವಾ ಸದಸ್ಯನಾಗಿ ಅಂಥ ಸಂಸ್ಥೆಯಲ್ಲಿ ಮಂಡಳಿಯಲ್ಲಿ ಸದಸ್ಯನಾಗಿ ಕುಟುಂಬದ ನಿಕಟ ಸಂಬಂಧಿಯಾಗಿರುವಂಥ ಯಾವೊಬ್ಬ ವ್ಯಕ್ತಿಯೊಂದಿಗೆ ಪ್ರತ್ಯಕ್ಷವಾಗಿ ಭಾಗಿಯಾಗಿರುವುದು ಅಥವಾ ಅಂಥ ಕಾಮಗಾರಿಗೆ ಸಂಬಂಧಪಟ್ಟ ಯಾವುದೇ ವ್ಯವಹಾರದಲ್ಲಿ ಸಹವರ್ತಿಯಾಗಿರುವುದು;

– ಕಂಡು ಬಂದರೆ, ರಾಜ್ಯ ಸರ್ಕಾರವು, ತಾಲ್ಲೂಕು ಪಂಚಾಯತ್ ಶಿಫಾರಸ್ಸು ಮಾಡಿದಾಗ ಅಥವಾ ಅನ್ಯಥಾ, ಯಾವೊಬ್ಬ ಸದಸ್ಯನನ್ನು ತೆಗೆದು ಹಾಕುವುದು ಸೂಕ್ತವೆಂದು ಅಭಿಪ್ರಾಯಪಟ್ಟರೆ, ತನ್ನ ಅಹವಾಲನ್ನು ಹೇಳಿಕೊಳ್ಳಲು ಅವನಿಗೆ ಅವಕಾಶವನ್ನು ಕೊಟ್ಟ ತರುವಾಯ ಮತ್ತು ಅವಶ್ಯಕವೆಂದು ತಾನು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ಆ ಯಾವೊಬ್ಬ ಸದಸ್ಯನನ್ನು ತೆಗೆದುಹಾಕಬಹುದು.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ, ಕುಟುಂಬದ ಹತ್ತಿರದ ಬಂಧುಗಳು ಎಂದರೆ:–

(ಎ) ಆಕೆಯ ಅಥವಾ ಆತನೊಂದಿಗೆ ವಾಸವಾಗಿರುವ ವ್ಯಕ್ತಿಯ ಪತ್ನಿ ಅಥವಾ ಪತಿ;

(ಬಿ) ಮಗ ಅಥವಾ ಮಗಳು ಅಥವಾ ಮಲಮಗ ಅಥವಾ ಮಲಮಗಳು,

(ಸಿ) ಅಂಥ ವ್ಯಕ್ತಿಯ ಮೇಲೆ ಸಂಪೂರ್ಣವಾಗಿ ಅವಲಂಬಿತನಾಗಿರುವ, ರಕ್ತಸಂಬಂಧವಾಗಿರಲಿ ಅಥವಾ ವಿವಾಹದಿಂದಾಗಲಿ, ಸಂಬಂಧಿಸಿದ ಯಾವೊಬ್ಬ ಇತರ ವ್ಯಕ್ತಿ.

(2) ಯಾವ ಅಧ್ಯಕ್ಷನನ್ನು ಅಥವಾ ಉಪಾಧ್ಯಕ್ಷನನ್ನು ಅಥವಾ ಸದಸ್ಯನನ್ನು (1)ನೇ ಉಪಪ್ರಕರಣದ ಅಡಿಯಲ್ಲಿ ಹಾಗೆ ತೆಗೆದುಹಾಕಲಾಗಿದೆಯೋ ಅವನು ಸದಸ್ಯನಾಗಿ ಕಾರ್ಯನಿರ್ವಹಿಸುವುದು ನಿಂತು ಹೋಗತಕ್ಕದ್ದು ಮತ್ತು ಅಧಿನಿಯಮದ 12ನೇ, 128ನೇ ಮತ್ತು 167ನೇ ಪ್ರಕರಣಗಳಲ್ಲಿ ಹೇಳಿರುವಂತೆ ಮುಂದಿನ ಐದು ವರ್ಷಗಳ ಅವಧಿಯವರೆಗೆ, ಯಾವುದೇ ಪಂಚಾಯತಿಯ ಚುನಾವಣೆಗೆ ಸ್ಪರ್ಧಿಸಲು ಅನರ್ಹರಾಗಿರತಕ್ಕದ್ದು."

**36. 136ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 136ಎ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"136ಎ. ಸದಸ್ಯರ ಆಸ್ತಿಗಳು ಮತ್ತು ಹೊಣೆಗಾರಿಕೆಗಳ ಘೋಷಣೆ.–** (1) ಪ್ರತಿಯೊಬ್ಬ ಸದಸ್ಯನು ತನ್ನ ಪದಾವಧಿಯು ಪ್ರಾರಂಭವಾದ ದಿನಾಂಕದಿಂದ ಮೂರು ತಿಂಗಳುಗಳ ಒಳಗೆ ಮತ್ತು ಪ್ರತಿ ಕ್ಯಾಲೆಂಡರ್ ವರ್ಷದಲ್ಲಿ ತನ್ನ ಸ್ಥಾನದ ಅವಧಿ ಮುಗಿಯುವವರೆಗೆ ಹಾಗೂ ಪ್ರತಿಯೊಂದು ಆರ್ಥಿಕ ವರ್ಷ ಮುಕ್ತಾಯವಾದ ಒಂದು ತಿಂಗಳ ಒಳಗೆ ಸಂಬಂಧಪಟ್ಟ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಯ ಮೂಲಕ ರಾಜ್ಯ ಚುನಾವಣಾ ಆಯೋಗದ ಮುಂದೆ, ನಿಯಮಿಸಬಹುದಾದಂಥ ನಮೂನೆಯಲ್ಲಿ ತಾನು ಹೊಂದಿರುವ ಮತ್ತು ತನ್ನ ಕುಟುಂಬದ ಎಲ್ಲ ಸದಸ್ಯರು ಹೊಂದಿರುವ ಎರಡು ಲಕ್ಷಕ್ಕಿಂತ ಹೆಚ್ಚಿನ ಚರ ಮತ್ತು ಸ್ಥಿರ ಆಸ್ತಿಯ ಮತ್ತು ಹೊಣೆಗಾರಿಕೆಯ ಘೋಷಣೆ ಮಾಡತಕ್ಕದ್ದು:

ಪರಂತು, ಹಣಕಾಸು ವರ್ಷ ಮುಕ್ತಾಯವಾಗುವ ಎರಡು ತಿಂಗಳ ಮೊದಲು ಅಂಥ ಸದಸ್ಯನ ಪದಾವಧಿಯು ಪ್ರಾರಂಭವಾದರೆ, ಅಂಥ ಸದಸ್ಯನು ಮುಂದಿನ ಹಣಕಾಸು ವರ್ಷ ಪ್ರಾರಂಭವಾದ ನಂತರ ಎರಡು ತಿಂಗಳೊಳಗೆ ಅಂಥ ಘೋಷಣೆಯನ್ನು ಮಾಡತಕ್ಕದ್ದು.

(2) ಸಂಬಂಧಪಟ್ಟ ತಾಲ್ಲುಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಯು, ಎಲ್ಲ ಸದಸ್ಯರು ಮಾಡಿದ ಘೋಷಣೆಯನ್ನು ಸ್ವೀಕರಿಸತಕ್ಕದ್ದು ಮತ್ತು ಆ ವರ್ಷದ ಮೇ ಮೊದಲ ವಾರದಲ್ಲಿ ರಾಜ್ಯ ಚುನಾವಣಾ ಆಯೋಗಕ್ಕೆ ಕಳುಹಿಸತಕ್ಕದ್ದು ಮತ್ತು ಘೋಷಣೆಯನ್ನು ತಡವಾಗಿ ಸಲ್ಲಿಸಿದ್ದ ಸಂದರ್ಭದಲ್ಲಿ ವರ್ಷದ ಜುಲೈ ಮೊದಲನೆ ವಾರದಲ್ಲಿ ಘೋಷಣೆಯನ್ನು ಮಾಡಿದ ಸದಸ್ಯರ ವಿವರ ಪತ್ರವನ್ನು ಮತ್ತು ಘೋಷಣೆಯನ್ನು ಮಾಡದೆ ಇರುವಂಥ ಸದಸ್ಯರ ವಿವರ ಪತ್ರವನ್ನು ಕಳುಹಿಸತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಘೋಷಣೆಯನ್ನು ಮಾಡಿರುವ ಸದಸ್ಯನು, ಆ ನಂತರ ಯಾವುದೇ ಸ್ವತ್ತನ್ನು ಅಥವಾ ಇತರ ಆಸ್ತಿಯನ್ನು ಆರ್ಜಿಸಿದರೆ ಅಥವಾ ಸಂದರ್ಭಾನುಸಾರವಾಗಿ ವಿಲೆ ಮಾಡಿದರೆ ಹಾಗೆ ಆರ್ಜಿಸಿದ ಅಥವಾ ವಿಲೆ ಮಾಡಿದ ದಿನಾಂಕದಿಂದ ನಲವತ್ತೈದು ದಿವಸಗಳ ಒಳಗಾಗಿ ಕಾರ್ಯನಿರ್ವಾಹಕ ಅಧಿಕಾರಿಯ ಮೂಲಕ ರಾಜ್ಯ ಚುನಾವಣಾ ಆಯೋಗದ ಮುಂದೆ ಆ ಬಗ್ಗೆ ಮತ್ತೊಮ್ಮೆ ಘೋಷಣೆಯನ್ನು ಮಾಡತಕ್ಕದ್ದು ಮತ್ತು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಯು (1)ನೇ ಉಪಪ್ರಕರಣದಲ್ಲಿರುವ ಕಾರ್ಯವಿಧಾನವನ್ನೇ ಅನುಸರಿಸತಕ್ಕದ್ದು.

**136ಬಿ. ಸದಸ್ಯತ್ವವು ನಿಂತುಹೋಗುವುದು.–** (1) ಸದಸ್ಯನು 136ಎ ಪ್ರಕರಣದ ಅಡಿಯಲ್ಲಿ ಘೋಷಣೆಯನ್ನು ದಾಖಲು ಮಾಡದಿದ್ದರೆ ಅಥವಾ ಸುಳ್ಳು ಘೋಷಣೆಯನ್ನು ದಾಖಲ್ಮಾಡಿದ್ದಾನೆಂಬುದು ಕಂಡುಬಂದರೆ, ಆತನನ್ನು ದುರ್ನಡತೆಯ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ರಾಜ್ಯ ಚುನಾವಣಾ ಆಯುಕ್ತರು, ಅಹವಾಲನ್ನು ಹೇಳಿಕೊಳ್ಳಲು ಅವನಿಗೆ ಅವಕಾಶವನ್ನು ನೀಡಿದ ನಂತರ, ಅವನನ್ನು ಸದಸ್ಯತ್ವದಿಂದ ತೆಗೆದುಹಾಕತಕ್ಕದ್ದು ಮತ್ತು ಸಂದರ್ಭಾನುಸಾರ ಅವನ ಸ್ಥಾನವು ಖಾಲಿಯಾಗಿದೆ ಎಂದು ಘೋಷಿಸತಕ್ಕದ್ದು.

(2) ಸದಸ್ಯನು ಮಾನ್ಯತೆ ಪಡೆದ ರಾಜಕೀಯ ಪಕ್ಷದ ಪ್ರತಿನಿಧಿಯಾಗಿದ್ದು ಆತನ ಪಕ್ಷವು ನೀಡಿದ ವಿಪ್ ನೋಟೀಸನ್ನು ಪಡೆಯುವುದನ್ನು ತಪ್ಪಿಸಿಕೊಂಡಲ್ಲಿ ಅಥವಾ ಯಾವುದೇ ಸಭೆಯಲ್ಲಿ, ಆತನ ಪಕ್ಷವು ನೀಡಿದ ವಿಪ್‌ಗೆ ಅನುಸಾರವಾಗಿ ಮತದಾನ ಮಾಡಲು ನಿರಾಕರಿಸಿದಲ್ಲಿ ಅಥವಾ ವಿಪ್‌ನ್ನು ಉಲ್ಲಂಘನೆ ಮಾಡಿ, ಮತದಾನ ಮಾಡಿದಲ್ಲಿ, ರಾಜ್ಯ ಚುನಾವಣಾ ಆಯೋಗವು ಆತನನ್ನು ಸದಸ್ಯತ್ವದಿಂದ ತೆಗೆದುಹಾಕತಕ್ಕದ್ದು ಮತ್ತು ಆತನ ಸ್ಥಾನವು ಖಾಲಿಯಾಗಿದೆ ಎಂದು ಘೋಷಿಸತಕ್ಕದ್ದು."

**37. 140ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 140ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ,–

(i) "ಆ ಉದ್ದೇಶಕ್ಕಾಗಿ ವಿಶೇಷವಾಗಿ ನಡೆದ ಸಭೆಯಲ್ಲಿ ತಾಲ್ಲೂಕು ಪಂಚಾಯತಿಯ ಚುನಾಯಿತ ಸದಸ್ಯರ ಒಟ್ಟು ಸಂಖ್ಯೆಯಲ್ಲಿ ಬಹುಮತದಿಂದ" ಎಂಬ ಪದಗಳಿಗೆ "ಚುನಾಯಿತ ಸದಸ್ಯರ ಪೈಕಿ ಅರ್ಧದಷ್ಟು ಸದಸ್ಯರು ನೋಟಿಸು ನೀಡಿದ ನಂತರ ಮತ್ತು ಒಟ್ಟು ಚುನಾಯಿತ ಸದಸ್ಯರಲ್ಲಿ ಮೂರನೇ ಎರಡರಷ್ಟು ಸದಸ್ಯರ ಬಹುಮತದಿಂದ" ಈ ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) ಪರಂತುಕದಲ್ಲಿ, "ಆರು ತಿಂಗಳೊಳಗೆ" ಎಂಬ ಪದಗಳಿಗೆ "ಮೂವತ್ತು ತಿಂಗಳೊಳಗೆ" ಎಂಬ ಪದಗಳನ್ನು ಪ್ರತಿಯೋಸತಕ್ಕದ್ದು.

(iii) ಎರಡನೇ ಪರಂತುಕದಲ್ಲಿ, "ಆರು ತಿಂಗಳೊಳಗೆ" ಎಂಬ ಪದಗಳಿಗೆ "ಎರಡು ವರ್ಷಗಳೊಳಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**38. 143ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 143ನೇ ಪ್ರಕರಣದ ಶೀರ್ಷಿಕೆ ಪ್ರಕರಣದಲ್ಲಿ ಅನುಕ್ರಮವಾಗಿ ಬರುವ "ಸರ್ಕಾರಿ ಅಧಿಕಾರಿಗಳ" ಮತ್ತು "ಯಾವುದೇ ಅಧಿಕಾರಿಯ" ಎಂಬ ಪದಗಳಿಗೆ "ಸರ್ಕಾರಿ ಅಥವಾ ಸರ್ಕಾರದ ಯಾವುದೇ ಸಮಿತಿ, ಕಂಪನಿ ಅಥವಾ ಸರ್ಕಾರವು ಅಧಿಸೂಚಿಸಿದಂತೆ ಗ್ರಾಮೀಣ ಅಭಿವೃದ್ಧಿಯಲ್ಲಿ ಒಳಗೊಂಡ ನಿಗಮದ ಅಧಿಕಾರಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**39. 145ನೇ ಪ್ರಕರಣದ ತಿದ್ದುಪಡಿ.–**ಮೂಲ ಅಧಿನಿಯಮದ 145ನೇ ಪ್ರಕರಣದಲ್ಲಿ, (2)ನೇ ಉಪ–ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ,–

"(3) ತಾಲ್ಲೂಕು ಪಂಚಾಯತಿಯ, ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಯ ಘಟಕವಾಗಿರತಕ್ಕದ್ದು ಮತ್ತು ಸ್ಥಳೀಯ ಸ್ವಯಂ ಆಡಳಿತದ ಸಂಸ್ಥೆಗಳಾಗಿ ಅದು ತನ್ನ ಕೆಲಸ ಕಾರ್ಯವನ್ನು ನಿರ್ವಹಿಸುವುದಕ್ಕೆ ಅನುವು ಮಾಡಿಕೊಡಲು ಅವಶ್ಯಕವಾಗಿರಬಹುದಾದಂಥ ಅಧಿಕಾರಗಳನ್ನು, ಪ್ರಾಧಿಕಾರವನ್ನು, ಸಿಬ್ಬಂದಿಗಳನ್ನು ರಾಜ್ಯವು, ಹಣಕಾಸು ಲಭ್ಯತೆಗೆ ಒಳಪಟ್ಟು ಪ್ರದಾನ ಮಾಡತಕ್ಕದ್ದು.

(4) ಪಂಚಾಯತ್ ಪ್ರದೇಶದೊಳಗೆ ಇರುವ ಸಾರ್ವಜನಿಕರ ಅಗತ್ಯತೆಗಳನ್ನು ಈಡೇರಿಸುವುದು ಪ್ರತಿಯೊಂದು ತಾಲೂಕು ಪಂಚಾಯತ್‌ನ ಕರ್ತವ್ಯವಾಗಿರತಕ್ಕದ್ದು ಮತ್ತು ತಾಲ್ಲೂಕು ಪಂಚಾಯತ್‌ನ ನಿಧಿಗಳ ಲಭ್ಯತೆಗೆ ಒಳಪಟ್ಟು ಅನುಸೂಚಿ–II ರಲ್ಲಿ ನಮೂದಿಸಿರುವ ಮತ್ತು ತಾಲ್ಲೂಕು ಪಂಚಾಯತ್‌ಗೆ ಸಂಬಂಧಿಸಿದ ಜವಾಬ್ದಾರಿ ನಕ್ಷೆಯಲ್ಲಿ ನಿರ್ದಿಷ್ಟಪಡಿಸಿರುವ ವಿಷಯಗಳ ನಿರ್ವಹಣೆಗೆ ಅದು ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಈ ಮುಂದೆ ಹೇಳಿರುವವುಗಳಿಗೆ ಹೆಚ್ಚುವರಿಯಾಗಿ ಎಲ್ಲರಿಗೂ ಸಾಮಾಜಿಕ ನ್ಯಾಯವನ್ನು ಒದಗಿಸಲು ತಾಲ್ಲೂಕು ಪಂಚಾಯತ್‌ಗಳು ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಯ ಸ್ಕೀಂಗಳನ್ನು ಸಿದ್ಧಗೊಳಿಸಲು ಮತ್ತು ಕಾರ್ಯಗತಗೊಳಿಸಲು, ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(ಎ) ಎಲ್ಲ ಸುಸಂಗತ ಸಮಾಜೋ–ಆರ್ಥಿಕ ಮಾಹಿತಿಗಳ ಡಾಟಾಬೇಸ್‌ನ್ನು ಮತ್ತು ಆ ಪ್ರದೇಶದ ಒಳಗೆ ಇರುವ ಎಲ್ಲಾ ನೈಸರ್ಗಿಕ ಮತ್ತು ಇತರ ಸಂಪನ್ಮೂಲಗಳ ಮತ್ತು ಆಸ್ತಿಗಳ ನಕಾಶೆ ಕ್ರೋಢೀಕರಿಸುವುದು, ನಿರ್ವಹಿಸುವುದು ಮತ್ತು ಇಡುವುದು ಹಾಗೂ ಪ್ರತಿಯೊಂದು ಗ್ರಾಮ ಪಂಚಾಯತ್‌ನಲ್ಲಿ ಸರ್ವೆ ಮಾಡಿದ ಫಲಿತಾಂಶವಾಗಿ ಪಡೆದ ಮಾಹಿತಿಯನ್ನು ಮತ್ತು ಗ್ರಾಮೀಣ ಪರಾಮರ್ಶನದ ಪರಿಣಾಮವಾಗಿ ಹೊಮ್ಮಿದ ಮಾಹಿತಿಯನ್ನು ಮತ್ತು ಪ್ರತಿಯೊಂದು ತಾಲ್ಲೂಕು ಪಂಚಾಯತ್ ನಡೆಸಿದ ಸರ್ವೆಗಳ

ಮತ್ತು ದತ್ತಾಂಶಗಳ ಸಂಗ್ರಹಣೆಯ ಪರಿಣಾಮವಾಗಿ ಹೊಮ್ಮಿದ  ಮಾಹಿತಿಯನ್ನು ಸೇರಿಸುವ ಸಲುವಾಗಿ ನಿಯತಕಾಲಿಕವಾಗಿ ಆ ಡಾಟಾಬೇಸ್‌ನ್ನು ಇಂದೀಕರಿಸುವುದು;

(ಬಿ) ಎಲ್ಲಾ ನಾಗರಿಕರಿಗೆ ಮತ್ತು ಅದರಲ್ಲೂ ಮುಖ್ಯವಾಗಿ ಸಮಾಜದ ಸುರಕ್ಷಿತವಲ್ಲದ ವರ್ಗಗಳಿಗೆ, ಸುರಕ್ಷತೆ, ಭದ್ರತೆ, ಸ್ವಾತಂತ್ರ್ಯ ಮತ್ತು ಹಕ್ಕುಗಳು ಎಲ್ಲವೂ ಇವೆ ಎಂಬುದನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಗ್ರಾಮ ಪಂಚಾಯತ್‌ಗಳಿಗೆ ನೆರವಾಗುವುದು;

(ಸಿ) ತಾಲ್ಲೂಕು ಮಟ್ಟದಲ್ಲಿ ಶಿಶು ಬೆಳವಣಿಗೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದೂ ಸೇರಿದಂತೆ ಮಹಿಳೆಯರ, ಮಕ್ಕಳ, ವಯೋವೃದ್ಧರ, ಅನಾರೋಗ್ಯದಿಂದ ಬಳಲುತ್ತಿರುವವರ ಮತ್ತು ಅಶಕ್ತರ ಆರೋಗ್ಯದ ಅವಶ್ಯಕತೆಗಳಿಗೆ ವಿಶೇಷ ಕಾಳಜಿ ಇದೆ ಎಂಬುದನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ತಾಲ್ಲೂಕಿನಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳ, ತಾಲ್ಲೂಕ ಆಸ್ಪತ್ರೆಗಳ, ಪಶು ಚಿಕಿತ್ಸಾಲಯಗಳ ಮತ್ತು ಪಾಲಿಕ್ಲಿನಿಕ್‌ಗಳ ಮೇಲ್ವಿಚಾರಣೆ ಮಾಡುವುದು;

(ಡಿ) ಸರ್ಕಾರಿ ಶಾಲೆಗಳ, ಆಶ್ರಮ ಶಾಲೆಗಳ ಮತ್ತು ವಿದ್ಯಾರ್ಥಿ ನಿಲಯಗಳ, ಅನಾಥಾಶ್ರಮಗಳ, ಸರ್ಕಾರಿ ಕೈಗಾರಿಕೆ, ವೃತ್ತಿ ತರಬೇತಿ ಸಂಸ್ಥೆಗಳ ಮತ್ತು ಶೈಕ್ಷಣಿಕ ಕೇಂದ್ರಗಳ ಮೇಲ್ವಿಚಾರಣೆ ಮತ್ತು ಸಾಕ್ಷರತೆಗೆ ಉತ್ತೇಜನ ಮತ್ತು ಇಂಟರ್‌ನೆಟ್ ಬಳಕೆಗೆ ಅವಕಾಶ ಕಲ್ಪಿಸುವುದರೊಂದಿಗೆ ಗ್ರಂಥಾಲಯಗಳ ಮೂಲಕ ಮಾಹಿತಿ ಪಡೆಯುವುದು ಮುಂತಾದ ಎಲ್ಲಾ ಸಂಬಂಧಿತ ಪ್ರಕಾರ್ಯಗಳನ್ನು ನೆರವೇರಿಸುವುದು;

(ಇ) ಸ್ವಯಂ ಉದ್ಯೋಗಕ್ಕೆ ಅವಕಾಶಗಳನ್ನು ಕಲ್ಪಿಸಲು ಹೋಂ-ಸ್ಟೇಗಳ, ಪ್ರವಾಸಿ ತಾಣಗಳ, ಖಾದಿ ಮತ್ತು ಗ್ರಾಮ ಕೈಗಾರಿಕೆಗಳ, ಆಹಾರ ದಾಸ್ತಾನು, ಆಹಾರ ಸಂಸ್ಕರಣೆ ಮತ್ತು ಚಿಲ್ಲರೆ ವ್ಯಾಪಾರ ಮಳಿಗೆಗಳ ಸ್ಥಾಪನೆಗೆ ಹಾಗೂ ಅವುಗಳ ಅಭಿವೃದ್ಧಿಗೆ ನೆರವಾಗುವುದು. ಪಡಿತರ ಪದ್ಧತಿಯ ನಿರ್ವಹಣೆ ಸೇರಿದಂತೆ ಗ್ರಾಮೀಣ ಉದ್ಯಮಗಳ ಮತ್ತು ಸಹಕಾರ ಸಂಘಗಳ ಮೂಲಕ ಬಡತನ ನಿವಾರಣೆಗೆ ನೆರವಾಗುವುದು;

(ಎಫ್) ಸಾಲಗಳನ್ನು ನೀಡುವ ಮತ್ತು ಉಳಿತಾಯ ಉತ್ತೇಜನ ನೀಡುವ ಮೂಲಕ ಸಣ್ಣ ವ್ಯಾಪಾರ ವ್ಯವಹಾರಕ್ಕೆ, ಗೃಹ ಮತ್ತು ಗುಡಿ ಕೈಗಾರಿಕೆಗಳ ಪ್ರೋತ್ಸಾಹ ನೀಡುವುದಕ್ಕಾಗಿ ತಾಲ್ಲೂಕು ಮಟ್ಟದಲ್ಲಿರುವ ಮಹಿಳಾ ಸಹಕಾರ ಬ್ಯಾಂಕುಗಳಿಗೆ ನೆರವು ನೀಡುವುದು ಮತ್ತು ಅದರ ನಿರ್ದೇಶಕರ ಮಂಡಳಿಗೆ ಮೂವರು ಮಹಿಳಾ ಸದಸ್ಯರನ್ನು ಪದನಿಮಿತ್ತ ನಿರ್ದೇಶಕರನ್ನಾಗಿ ನಾಮನಿರ್ದೇಶನ ಮಾಡುವುದು, ಆ ಮೂವರಲ್ಲಿ ಒಬ್ಬರು ಅನುಸೂಚಿಯ ಜಾತಿಯ ಅಥವಾ ಅನುಸೂಚಿತ ಪಂಗಡದವರಾಗಿರತಕ್ಕದ್ದು;

(ಜಿ) ಪ್ರದೇಶದ ಜೀವ ವೈವಿಧ್ಯತೆಯನ್ನು ಮತ್ತು ಪರಿಸರವನ್ನು ಸಂರಕ್ಷಣೆ ಮಾಡಲು ಮತ್ತು ರಕ್ಷಿಸಲು, ಪೋಷಿಸಲು ಮೂಲ ಸಾಮಗ್ರಿಗಳ ಬೆಂಬಲವನ್ನು ನೀಡುವ ಮೂಲಕ ಮತ್ತು ಸಾಮಾಜಿಕ ಅರಣ್ಯ ನಿರ್ಮಾಣಕ್ಕೆ, ಯೋಜನೆ ರೂಪಿಸುವುದಕ್ಕೆ ಮತ್ತು ಬಹುಗ್ರಾಮ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣಾ ಘಟಕಗಳ ನಿರ್ವಹಣೆಯಲ್ಲಿ ಪಂಚಾಯತಿಗಳಿಗೆ ನೆರವಾಗುವುದು;

(ಹೆಚ್) ಜಾನುವಾರು ಜಾತ್ರೆಗಳ, ಮೇಳಗಳ, ವಸ್ತುಪ್ರದರ್ಶನಗಳ ಮತ್ತು ತಾಲ್ಲೂಕು ಮಟ್ಟದ ಸಾರ್ವಜನಿಕ ಮಾರುಕಟ್ಟೆಗಳ ಮೂಲಕ ಗ್ರಾಮೀಣ ಉತ್ಪನ್ನಗಳ, ಉತ್ಪಾದನೆಗಳ ಮತ್ತು ಜಾನುವಾರುಗಳ ಮಾರಾಟಕ್ಕೆ ಉತ್ತೇಜನ ನೀಡುವುದು, ಅದಕ್ಕೆ ಸಂಬಂಧಪಟ್ಟ ಎಲ್ಲಾ ಕೆಲಸಕಾರ್ಯಗಳನ್ನು ನೆರವೇರಿಸುವುದು;

(ಐ) ಶುದ್ಧ ಕುಡಿಯುವ ನೀರು ಒದಗಿಸಲು ಮತ್ತು ನಿರಂತರ ವಿದ್ಯುತ್ ಪೂರೈಕೆ ಮಾಡಲು ಗ್ರಾಮಪಂಚಾಯತ್‌ಗೆ ಸಾಧ್ಯವಾಗುವಂತೆ ಮಾಡುವುದು. ಮತ್ತು ಇವೆರಡೂ ಲಭ್ಯವಾಗುವುದಕ್ಕೆ ಬೇಕಾಗುವ ತಾಂತ್ರಿಕ ನೆರವನ್ನು ಒದಗಿಸುವುದೂ ಸೇರಿದಂತೆ ಅದನ್ನು ಖಚಿತಪಡಿಸಿಕೊಳ್ಳಲು ಅಗತ್ಯಪಡಿಸಿದ ಮೂಲಸೌಕರ್ಯಗಳನ್ನು ಸ್ಥಾಪಿಸುವುದು;

(ಜೆ) ಸಂಭವನೀಯ ಅಪಾಯಗಳ ಪ್ರಮಾಣವನ್ನು ನಿರ್ಧರಿಸುವುದು ಮತ್ತು ವಿಕೋಪ ನಿರ್ವಹಣೆಯ ವಿಧಿವಿಧಾನಗಳನ್ನು ರೂಪಿಸುವುದು ಮತ್ತು ದಾಖಲಿಸುವುದು ಮತ್ತು ಎಲ್ಲ ಬಗೆಯ ಸಂಭವನೀಯ ವಿಕೋಪಗಳನ್ನು ಎದುರಿಸಲು ಸಾಧ್ಯವಾಗುವ ಹಾಗೆ ಎಲ್ಲ ವಿಧವಾದ ವೈದ್ಯಕೀಯ ಮತ್ತು ಇತರ ಅಗತ್ಯತೆಗಳಂಥ ಸಂಪನ್ಮೂಲಗಳನ್ನು ಒದಗಿಸುವ ಮೂಲಕ ಈ ಜ್ಞಾನವನ್ನು ಸಂಗ್ರಹಿಸಿ ಮತ್ತು ಪ್ರಸಾರ ಮಾಡಿ  ಮತ್ತು ಗ್ರಾಮಪಂಚಾಯತ್‌ಗಳು ಮತ್ತು ಜಿಲ್ಲಾಪಂಚಾಯತ್‌ಗಳು, ಸರ್ಕಾರೇತರ ಸಂಸ್ಥೆಗಳು ಮತ್ತು ಆಯಾಯ ಕ್ಷೇತ್ರಗಳಲ್ಲಿ ಪರಿಣಿತರಾದ ವ್ಯಕ್ತಿಗಳು ನೀಡುವ ಸಹಕಾರವನ್ನು ಮತ್ತು ಅವರು ಪಾಲ್ಗೊಳ್ಳುವುದನ್ನು ಪಟ್ಟಿ ಮಾಡಿ ತಾಲ್ಲೂಕಿನಲ್ಲಿ ವಿಕೋಪವನ್ನು ಎದುರಿಸಲು ಸಜ್ಜಾಗಿರುವುದನ್ನು ಸುನಿಶ್ಚಿತಪಡಿಸಿಕೊಳ್ಳುವುದು;

(ಕೆ) ತಾಲ್ಲೂಕು ಮಟ್ಟದಲ್ಲಿ ಸಮಾಜದ ಎಲ್ಲ ವರ್ಗಗಳ ಜನರ ಸಾಮಾಜಿಕ ಮತ್ತು ಸಾಂಸ್ಕೃತಿಕ ಕಲಾ ಪ್ರಕಾರಗಳಿಗೆ, ಕ್ರೀಡೆಗಳಿಗೆ, ಕುಶಲಕಲೆಗಳಿಗೆ, ಕೌಶಲ್ಯಗಳಿಗೆ ಮತ್ತು ಆಚರಣೆಗಳಿಗೆ  ಉತ್ತೇಜನ ನೀಡುವುದು ಮತ್ತು ಅವೆಲ್ಲವುಗಳನ್ನು ಸಂರಕ್ಷಿಸುವುದು;

(ಎಲ್) ತಾಲ್ಲೂಕು ಪಂಚಾಯತ್ ಪ್ರದೇಶದ ಅಗತ್ಯತೆಗಳನ್ನು ಈಡೇರಿಸುವುದು ಮತ್ತು ಗ್ರಾಮ ಪಂಚಾಯತ್‌ಗಳ ಅಗತ್ಯತೆಗಳಿಗೆ ಮತ್ತು ಕೋರಿಕೆಗಳಿಗೆ ಸ್ಪಂದಿಸುವುದು ಮತ್ತು ಅನುಸೂಚಿ-IIರಲ್ಲಿ ಪಟ್ಟಿ ಮಾಡಿದ ವಿಷಯಗಳಿಗೆ ಸಂಬಂಧಿಸಿದಂತೆ ಆ ಪ್ರದೇಶದಲ್ಲಿ ಅವಶ್ಯಕವಾಗಬಹುದಾದಂತೆ ಅವರಿಗೆ ನೆರವನ್ನು ನೀಡುವುದು;

(ಎಂ) ಸಂಬಂಧಪಟ್ಟ ನಗರ ಸ್ಥಳೀಯ ಆಡಳಿತದೊಂದಿಗೆ ಪ್ರತಿ ಐದು ವರ್ಷಗಳಿಗೊಮ್ಮೆ ಅವಶ್ಯಕ ಸಾಮಾಜಿಕ-ಆರ್ಥಿಕ ಅಂಕಿ ಅಂಶಗಳ ಸಂಗ್ರಹಣೆ,  ಬೆಳೆ ಗಣತಿ ಮತ್ತು ಜಾನುವಾರು ಗಣತಿ,  ನಿರುದ್ಯೋಗ ವ್ಯಕ್ತಿಗಳ ಗಣತಿ ಮತ್ತು ತಾಲ್ಲೂಕು ಪ್ರದೇಶದಲ್ಲಿ ಬಡತನ ರೇಖೆಯ ಕೆಳಗಿರುವ ವ್ಯಕ್ತಿಗಳ ಗಣತಿಯನ್ನು ಸಮೀಕ್ಷೆ ನಡೆಸುವುದು;

(ಎನ್) ತಾನು ನಡೆಸಿದ ಸಮೀಕ್ಷೆಯನ್ನು ಆಧಾರವಾಗಿಟ್ಟುಕೊಂಡು, ಗ್ರಾಮಪಂಚಾಯತ್‌ನ ನೆರವಿನೊಂದಿಗೆ ಅದರ ಪ್ರದೇಶದೊಳಗಿನ ಎಲ್ಲಾ ಗ್ರಾಮಪಂಚಾಯತ್‌ಗಳ ಯೋಜನೆಗಳನ್ನು ಕ್ರೋಢೀಕರಿಸಿ, ತನ್ನದೇ ಆದ ದೂರದೃಷ್ಟಿ ಯೋಜನೆಯನ್ನು ರೂಪಿಸುವುದು ಮತ್ತು ತಾಲ್ಲೂಕಿನಲ್ಲಿರುವ ಗ್ರಾಮ ಪಂಚಾಯತ್‌ಗಳ ವ್ಯಾಪ್ತಿಗೆ ಒಳಪಡುವ ಪ್ರದೇಶಗಳನ್ನು ಹೊರತುಪಡಿಸಿ ತನ್ನದೇ ಆದ ಅಭಿವೃದ್ಧಿ ಯೋಜನೆಯನ್ನು ಆ ದೂರದೃಷ್ಟಿ ಯೋಜನೆಯಲ್ಲಿ ಸೇರಿಸುವುದು;

(ಒ) ಗ್ರಾಮ ಪಂಚಾಯತ್‌ಗಳೇ ಸ್ವತಃ ಕೈಗೊಳ್ಳಲಾಗದಿರುವಂಥ ರಸ್ತೆಗಳ ಮತ್ತು ಸೇತುವೆಗಳ ಮತ್ತು ನೀರಿನ ಕಾಲುವೆಗಳ, ಏತ ನೀರಾವರಿ ಮತ್ತು ಸಣ್ಣ ನೀರಾವರಿ ಯೋಜನೆಗಳನ್ನು ಹಣಕಾಸು ಲಭ್ಯತೆಗೆ ಒಳಪಟ್ಟು ಅನುಷ್ಠಾನಗೊಳಿಸುವುದು ಮತ್ತು ನಿರ್ವಹಿಸುವುದು;

(ಪಿ) ನಿವಾಸಿಗಳ ಆರೋಗ್ಯ, ಸುರಕ್ಷತೆ, ಶಿಕ್ಷಣ, ಅಥವಾ ಸಾಮಾಜಿಕ ಮತ್ತು ಆರ್ಥಿಕ ಉನ್ನತಿಗೆ ಉತ್ತೇಜನ ನೀಡಲು ಪಂಚಾಯತ್ ಪ್ರದೇಶದ ಒಳಗಿನ ಪರಿಸರದ ಸಂರಕ್ಷಣೆಗೆ ಮತ್ತು ಅದಕ್ಕೆ ಅಗತ್ಯವಾದ ಅಥವಾ ಪ್ರಾಸಂಗಿಕವಾದ ಯಾವುದೇ ಇತರ ಕಾಮಗಾರಿಯನ್ನು ಅಥವಾ ಕಾರ್ಯಕ್ರಮವನ್ನು ಕೈಗೊಳ್ಳುವುದು."

**40. 145ಎ ಯಿಂದ 145ಡಿ ವರೆಗಿನ ಹೊಸ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 145ನೇ ಪ್ರಕರಣದ ತರುವಾಯ, ಈ ಮುಂದಿನ ಹೊಸ ಪ್ರಕರಣಗಳನ್ನು ಸೇರಿಸತಕ್ಕದ್ದು, ಎಂದರೆ:–

"**145ಎ. ಯೋಜನೆಗಳ ಕ್ರೋಢೀಕರಣ ಮತ್ತು ಸಮಗ್ರಗೊಳಿಸುವಿಕೆ.–** (1) ತಾಲ್ಲೂಕು ಪಂಚಾಯತಿಯಲ್ಲಿನ ನಿಧಿಗಳ ಲಭ್ಯತೆಗೆ ಒಳಪಟ್ಟು, ತಾಲ್ಲೂಕು ಪಂಚಾಯಿತಿಯು, ಯೋಜನೆಗಳ ಅಂಶಗಳು ಮತ್ತು ಅಗತ್ಯಪಡಿಸಿದ ನಿಧಿಗಳ ಅಂದಾಜನ್ನು ಒಳಗೊಂಡು ಅದರ ಸ್ವಂತ ಅಗತ್ಯತೆಗಳನ್ನು ಸೇರಿಸಿ, ಗ್ರಾಮ ಪಂಚಾಯಿತಿಗಳು ಹಾಜುರುಪಡಿಸಿದ ಯೋಜನೆಗಳನ್ನು, ಕ್ರೋಢೀಕರಿಸುವ ಮೂಲಕ, ಅದರ ಆದ್ಯತಾನುಸಾರದ ಅಗತ್ಯತೆಗಳನ್ನು ಸೂಚಿಸುವ ದೂರದೃಷ್ಟಿ ಯೋಜನೆಯನ್ನು ಮತ್ತು ವಾರ್ಷಿಕ ಅಭಿವೃದ್ಧಿ ಯೋಜನೆಗಳನ್ನು ಸಿದ್ದಪಡಿಸತಕ್ಕದ್ದು ಮತ್ತು ಅದರ ಪ್ರತಿಯನ್ನು ಜಿಲ್ಲಾ ಪಂಚಾಯಿತಿಗೆ ಸಲ್ಲಿಸಿ, ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಗೆ ಅದನ್ನು ಹಾಜರುಪಡಿಸತಕ್ಕದ್ದು. ಗ್ರಾಮ ಪಂಚಾಯಿತಿಗಳ ಯೋಜನೆಗಳನ್ನು, ನಿಧಿಗಳ ಲಭ್ಯತೆ ಅಥವಾ ಸರ್ಕಾರದ ಮಾರ್ಗಸೂಚಿಗಳು ಅಥವಾ ನಿರ್ದೇಶನಗಳನ್ನು ಹೊರತುಪಡಿಸಿ ಬದಲಾಯಿಸತಕ್ಕದ್ದಲ್ಲ.

(2) ಪ್ರದೇಶದಲ್ಲಿ ಅನುಷ್ಠಾನಗೊಳಿಸಬೇಕಾದ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಸ್ಕೀಮುಗಳ ಆದ್ಯತೆಯನ್ನು ನಿರ್ಧರಿಸುವಲ್ಲಿ, ಪ್ರದೇಶದ ಹಿಂದುಳಿದಿರುವಿಕೆ, ಅಗತ್ಯತೆಯ ತುರ್ತು, ಪರಿಣಾಮದ ಮಟ್ಟ ಮತ್ತು ಜನಸಂಖ್ಯೆಯನ್ನು ಪರಿಗಣನೆಗೆ ತೆಗೆದುಕೊಂಡು ಆದ್ಯತಾ ಶ್ರೇಣಿ ವಿಧಾನವನ್ನು ಅಳವಡಿಸತಕ್ಕದ್ದು.

**145ಬಿ. ಅಪಾಯಕಾರಿ ಕಲ್ಲು ಗಣಿಗಾರಿಕೆ, ಕೊಳವೆ ಬಾವಿಗಳು, ತೆರೆದ ಬಾವಿಗಳು ಮತ್ತು ಗುಂಡಿಗಳು.–** ತಾಲ್ಲೂಕು ಪಂಚಾಯಿತಿಯು, ಪ್ರದೇಶದ ನಿವಾಸಿಗಳಿಗೆ ಕೇಡು ಅಥವಾ ಅಪಾಯ ಉಂಟು ಮಾಡುವ ಕಾನೂನುಬಾಹಿರ ಕಲ್ಲು ಗಣಿಗಾರಿಕೆ, ಕೊಳವೆ ಬಾವಿ ಕೊರೆಯುವಿಕೆ, ತೆರದ ಬಾವಿಗಳು ಅಥವಾ ಗುಂಡಿಗಳ ತೋಡುವಿಕೆ ಕಾರ್ಯಗಳನ್ನು ನಿಲ್ಲಿಸುವ ಅಧಿಕಾರವನ್ನು ಹೊಂದಿರುವ ಸಂಬಂಧಪಟ್ಟ ಪ್ರಾಧಿಕಾರಗಳಿಗೆ ನೆರವು ನೀಡತಕ್ಕದ್ದು ಮತ್ತು ಅವುಗಳಿಗೆ ಸಂಬಂಧಿಸಿದ ವ್ಯಕ್ತಿ ಅಥವಾ ಜನರ ವೆಚ್ಚದಲ್ಲಿ ಅಥವಾ ಸಂದರ್ಭಾನುಸಾರ ಅವರಿಬ್ಬರಿಂದಲೂ ಅವುಗಳಿಗೆ ಭದ್ರತೆ ಮಾಡಲು ಅವುಗಳಿಗೆ ಬೇಲಿ ನಿರ್ಮಿಸುವ ಅಥವಾ ಅವುಗಳನ್ನು ಭರ್ತಿ ಮಾಡುವ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

**145ಸಿ. ಜೀವ ವೈವಿಧ್ಯತೆ, ಸಾಮಾಜಿಕ ಅರಣ್ಯ ಮತ್ತು ಪರಿಸರ.–** ತಾಲ್ಲೂಕು ಪಂಚಾಯಿತಿಯು, ಆ ಪ್ರದೇಶದ ಜೀವ ವೈವಿಧ್ಯತೆಯನ್ನು ಮತ್ತು ಪರಿಸರವನ್ನು ಸಂರಕ್ಷಿಸಲು, ಕಾಪಾಡಲು ಮತ್ತು ಪೋಷಿಸಲು ತಾಂತ್ರಿಕ ಮತ್ತು ಮೂರ್ತ ರೂಪದ ಸಹಾಯವನ್ನು ಒದಗಿಸುವ ಮೂಲಕ ಅದರ ಪ್ರದೇಶದೊಳಗಿನ ಗ್ರಾಮ ಪಂಚಾಯಿತಿಗಳಿಗೆ ನೆರವು ನೀಡತಕ್ಕದ್ದು ಮತ್ತು ಸಾಮಾಜಿಕ ಅರಣ್ಯ ಬೆಳೆಸುವುದಕ್ಕಾಗಿ ಯೋಜನೆಯನ್ನು ರೂಪಿಸತಕ್ಕದ್ದು ಮತ್ತು ಬಹುಗ್ರಾಮ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣಾ ಘಟಕಗಳನ್ನು ಸ್ಥಾಪಿಸತಕ್ಕದ್ದು ಮತ್ತು ನಿರ್ವಹಣೆ ಮಾಡತಕ್ಕದ್ದು.

**145ಡಿ. ಮಾಹಿತಿ ನಿರ್ವಹಣೆ.–** ತಾಲ್ಲೂಕು ಪಂಚಾಯಿತಿಯ ತನ್ನ ಪ್ರದೇಶದೊಳಗಿನ ಎಲ್ಲ ಸಂಬಂಧಪಟ್ಟ ಸಮಾಜೋ– ಆರ್ಥಿಕ ಮಾಹಿತಿ, ಎಲ್ಲ ನೈಸರ್ಗಿಕ, ಇತರ ಸಂಪನ್ಮೂಲ ಮತ್ತು ಸಂಪತ್ತಿನ ನಕಾಶೆಯ ದತ್ತಾಂಶವನ್ನು ಕ್ರೋಢೀಕರಿಸಿತಕ್ಕದ್ದು, ನಿರ್ವಹಣೆ ಮಾಡತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು ಮತ್ತು ಅದು ನಡೆಸಿದ ಸಮೀಕ್ಷೆಗಳ ಪರಿಣಾಮವಾಗಿ ಪಡೆದ ಮಾಹಿತಿಯನ್ನು ಸಂಗ್ರಹಿಸಿ ಅವರು ನಿಯತಕಾಲಿಕವಾಗಿ ಇಂದಿನವರಗೆ ನಿರ್ವಹಿಸತಕ್ಕದ್ದು ಮತ್ತು ಪ್ರತಿಯೊಂದು ಗ್ರಾಮ ಪಂಚಾಯಿತಿಯಲ್ಲಿ ಪಂಚಾಯತ್ ರಾಜ್ ಅಂದಾಜು ಸಮೀಕ್ಷೆಗಳನ್ನು ನಡೆಸತಕ್ಕದ್ದು."

**41. 152ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 152ನೇ ಪ್ರಕರಣದಲ್ಲಿ, (ಇ) ಖಂಡದಲ್ಲಿ **"ಇಪ್ಪತ್ತೈದು ಸಾವಿರ ರೂಪಾಯಿಗಳ"** ಎಂಬ ಪದಗಳಿಗೆ **"ಒಂದು ಲಕ್ಷ ರೂಪಾಯಿಗಳ"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು,

**42. 154ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 154ನೇ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"154. ಕರಾರುಗಳನ್ನು ಮಾಡಿಕೊಳ್ಳುವ ವಿಧಾನ.–** (1) ತಾಲ್ಲೂಕು ಪಂಚಾಯಿತಿಯ ಪರವಾಗಿ ಕಾಮಗಾರಿಗಳನ್ನು ನಿರ್ವಹಿಸಲು ಅಥವಾ ಸರಕುಗಳು ಅಥವಾ ಸೇವೆಗಳನ್ನು ಪೂರೈಸಲು, ನಮೂದು ಮಾಡಿರುವ ಪ್ರತಿಯೊಂದು ಕರಾರು ಅಥವಾ ಒಪ್ಪಂದವು, ಈ ಪ್ರಕರಣದ ಉಪಬಂಧಗಳು ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಗಳಲ್ಲಿ ಪಾರದರ್ಶಕತೆಯ ಅಧಿನಿಯಮ 1999ರ ಉಪಬಂಧಗಳಿಗನುಸಾರವಾಗಿರತಕ್ಕದ್ದು.

(2) ಕಾರ್ಯನಿರ್ವಹಣಾಧಿಕಾರಿಯು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಉಪಬಂಧಗಳ ಅಡಿಯಲ್ಲಿ ಆತನು ಮಾಡಲು ಅಧಿಕಾರವನ್ನು ಹೊಂದಿರುವ ವಿಷಯಗಳ ಸಂಬಂಧದಲ್ಲಿ ತಾಲ್ಲೂಕು ಪಂಚಾಯಿತಿಯ ಪರವಾಗಿ ಕರಾರು ಅಥವಾ ಒಪ್ಪಂದಗಳನ್ನು ಮಾಡತಕ್ಕದ್ದು ಮತ್ತು ಅಂಥ ಕರಾರು ಅಥವಾ ಒಪ್ಪಂದವು ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಕರಾರು ಅಥವಾ ಒಪ್ಪಂದದ ಅಂಥ ಮೌಲ್ಯದ ಮೊಬಲಗಿನವರೆಗೆ ಕಾರ್ಯನಿರ್ವಹಿಸತಕ್ಕದ್ದು."

**43. 160ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 160ನೇ ಪ್ರಕರಣದಲ್ಲಿ,–

(i) "ವ್ಯಕ್ತಿಗಳಿರತಕ್ಕದ್ದು" ಎಂಬ ಪದಗಳಿಗೆ ಮೊದಲು **"ಇಪ್ಪತ್ತಕ್ಕಿಂತಲೂ ಕಡಿಮೆಯಲ್ಲದಂತೆ"** ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) "ನಲವತ್ತು ಸಾವಿರ ಜನಸಂಖ್ಯೆಗೆ" ಎಂಬ ಪದಗಳಿಗೆ "ಮೂವತ್ತೈದು ಸಾವಿರ ಮತ್ತು ನಲವತ್ತೈದು ಸಾವಿರದ ಜನಸಂಖ್ಯೆಯ ನಡುವಣ ಪ್ರತಿಯೊಂದು ಜನಸಂಖ್ಯೆಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**44. 163ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 163ನೇ ಪ್ರಕರಣದಲ್ಲಿ, (ಬಿ) ಖಂಡದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, 124ನೇ ಪ್ರಕರಣದ ಅಡಿಯಲ್ಲಿ ನಿರ್ಧರಿಸಿದ ಜಿಲ್ಲಾ ಪಂಚಾಯತ್ ಮತ ಕ್ಷೇತ್ರದಲ್ಲಿ ಒಳಗೊಂಡಿರುವ ಪ್ರದೇಶವನ್ನು, ಪ್ರತಿಯೊಂದು ಪ್ರಾದೇಶಿಕ ಚುನಾವಣಾ ಕ್ಷೇತ್ರದ ವ್ಯಾಪ್ತಿಯನ್ನು ನಿರ್ಧರಿಸುವಾಗ ವಿಭಜನೆ ಮಾಡತಕ್ಕದ್ದಲ್ಲ."

**45. 171ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 171ನೇ ಪ್ರಕರಣದಲ್ಲಿ "ಸಿವಿಲ್ ನ್ಯಾಯಾಧೀಶ (ಹಿರಿಯ ವರ್ಗ)ನಿಗೆ, ಎಂಬ ಪದಗಳಿಗೆ "ಗೊತ್ತುಪಡಿಸಲಾದ ನ್ಯಾಯಾಲಯಕ್ಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**46. 175ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 175ನೇ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**175. ಸದಸ್ಯರನ್ನು ತೆಗೆದುಹಾಕುವುದು.–** (1) ಸರ್ಕಾರವು, ಅದು ಯುಕ್ತವೆಂದು ಭಾವಿಸಿದಲ್ಲಿ ಜಿಲ್ಲಾಪಂಚಾಯತ್‌ನ ಶಿಫಾರಸ್ಸಿನಂತೆ ಯಾವೊಬ್ಬ ಸದಸ್ಯನನ್ನು,–

(i) ಆತನು ತನ್ನ ಕರ್ತವ್ಯಗಳನ್ನು ನಿರ್ವಹಿಸುವಾಗ ದುರ್ನಡತೆಯ ಅಥವಾ ತಲೆ ತಗ್ಗಿಸುವಂಥ ನಡತೆಯ ತಪ್ಪಿತಸ್ಥನಾಗಿದ್ದಾನೆಂದು,

(ii) (ಎ) ಜಿಲ್ಲಾ ವೈದ್ಯಾಧಿಕಾರಿಯು ಪ್ರಮಾಣಿಕರಿಸಬಹುದಾದಂತೆ ಆ ಹುದ್ದೆಯನ್ನು ಹೊಂದಲು ವೈದ್ಯಕೀಯವಾಗಿ ಅಸಮರ್ಥನಾದ ಸಂದರ್ಭದಲ್ಲಿ,

(ಬಿ) ದಿವಾಳಿ ಅಥವಾ ಅಸ್ವಸ್ಥಚಿತ್ತವನಾದ ಸಂದರ್ಭದಲ್ಲಿ,

– ಸದಸ್ಯರಾಗಿ ತಮ್ಮ ಕರ್ತವ್ಯ ನಿರ್ವಹಿಸಲು ಅಸಮರ್ಥರಾಗಿರುವರೆಂದು ಅಥವಾ ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಅಸಡ್ಡೆ ಉಳ್ಳವರಾಗಿದ್ದಾರೆಂದು;

(iii) ಅವನು ಪಂಚಾಯತ್‌ನ ನಾಲ್ಕು ಒಂದಾದ ಮೇಲೊಂದರಂತೆ ಆದ ಸಭೆಗಳಿಗೆ ಹಾಜರಾಗಲು ತಪ್ಪಿದ್ದರೆ, ಮತ್ತು ಅಧ್ಯಕ್ಷನಾಗಲಿ ಅಥವಾ ಉಪಾಧ್ಯಕ್ಷನಾಗಲಿ ಸಭೆಯನ್ನು ಕರೆಯಬೇಕಾಗಿದ್ದಾಗ ಅಥವಾ ಅಗತ್ಯವಾಗಿದ್ದಾಗ ಒಂದಾದ ಮೇಲೊಂದರಂತೆ ನಡೆಯಬೇಕಾದ ಎರಡು ಸಭೆಗಳನ್ನು ಕರೆಯಲು ತಪ್ಪಿದ್ದಾನೆಂದು; ಅಥವಾ

(iv) ಚುನಾವಣೆ ಸಂದರ್ಭದಲ್ಲಿ ಪರಿಗಣೆಗಾಗಿ ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಪಂಚಾಯತಿಯ ಸದಸ್ಯ ಅಥವಾ ಅಧ್ಯಕ್ಷ ಅಥವಾ ಉಪಾಧ್ಯಕ್ಷರ ಹುದ್ದೆಯ ಮಾರಾಟಕ್ಕೆ ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಸಂದರ್ಭಾನುಸಾರವಾಗಿ ಜಿಲ್ಲಾ ಪಂಚಾಯತಿಯ ಯಾವುದೇ ಮತದಾರ ಅಥವಾ ಸದಸ್ಯನನ್ನು ಸೆಳೆಯುವುದು ಅಥವಾ ದಬ್ಬಾಳಿಕೆ ಅಥವಾ ವಂಚನೆ ಮಾಡಿದ್ದಾನೆಂದು;

(v) ಪಂಚಾಯತ್‌ನ ಯಾವುದೇ ಬೇರೆ ರೀತಿಯ ಕಾಮಗಾರಿಯನ್ನು ಕಾರ್ಯಗತಗೊಳಿಸುವಾಗ, ಕರಾರು ಸಂಬಂಧದ ಅಥವಾ ಕಾಮಗಾರಿಗೆ ಸಂಬಂಧಿಸಿದ ಯಾವುದೇ ವ್ಯವಹಾರದಲ್ಲಿ ಕುಟುಂಬದ ಹತ್ತಿರದ ಸಂಬಂಧಿಯಾಗಿರುವ ಯಾವೊಬ್ಬ ವ್ಯಕ್ತಿಯೊಂದಿಗೆ ಪ್ರತ್ಯಕ್ಷವಾಗಿ ತೊಡಗಿರುವುದು ಕಂಡುಬಂದರೆ ಅಥವಾ ಪಾಲುದಾರನಂತೆ, ನೌಕರನಂತೆ ಅಥವಾ ಅಂಥ ಅನ್ಯಥಾ ಸಂಘಸಂಸ್ಥೆ ಮಂಡಲಿಯಲ್ಲಿ ಸದಸ್ಯನಂತೆ ಸಹಭಾಗಿಯಾಗಿರುವನೆಂದು,

– ಕಂಡು ಬಂದರೆ, ಅವನಿಗೆ ಅಹವಾಲನ್ನು ಹೇಳಿಕೊಳ್ಳಲು ಅವಕಾಶ ನೀಡಿದ ನಂತರ ಮತ್ತು ಅಗತ್ಯವೆಂದು ತಾನು ಭಾವಿಸಿದಂಥ ವಿಚಾರಣೆ ಮಾಡಿದ ನಂತರ ತೆಗೆದು ಹಾಕುವುದು ಸೂಕ್ತವೆಂದು ಭಾವಿಸಿದ್ದರೆ ಆ ಸದಸ್ಯನನ್ನು ಆತನ ಸದಸ್ಯತ್ವದಿಂದ ತೆಗೆದುಹಾಕಬಹುದು.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ, ಕುಟುಂಬದ ಹತ್ತಿರದ ಬಂಧುಗಳು ಎಂದರೆ:–

(ಎ) ಆಕೆಯ ಅಥವಾ ಆತನೊಂದಿಗೆ ವಾಸವಾಗಿರುವ ವ್ಯಕ್ತಿಯ ಪತ್ನಿ ಅಥವಾ ಪತಿ;

(ಬಿ) ಮಗ ಅಥವಾ ಮಗಳು ಅಥವಾ ಮಲಮಗ ಅಥವಾ ಮಲಮಗಳು,

(ಸಿ) ಅಂಥ ವ್ಯಕ್ತಿಯ ಮೇಲೆ ಸಂಪೂರ್ಣವಾಗಿ ಅವಲಂಬಿತನಾಗಿರುವ, ರಕ್ತಸಂಬಂಧವಾಗಿರಲಿ ಅಥವಾ ವಿವಾಹದಿಂದಾಗಲಿ, ಸಂಬಂಧಿಸಿದ ಯಾವೊಬ್ಬ ಇತರ ವ್ಯಕ್ತಿ.

(2)ಯಾವ ಅಧ್ಯಕ್ಷನನ್ನು ಅಥವಾ ಉಪಾಧ್ಯಕ್ಷನನ್ನು ಅಥವಾ ಸದಸ್ಯನನ್ನು ಹಾಗೆ ತೆಗೆದು ಹಾಕಲಾಗಿದೆಯೋ ಆ ಅಧ್ಯಕ್ಷನು ಅಥವಾ ಉಪಾಧ್ಯಕ್ಷನು ಅಥವಾ ಸದಸ್ಯನು, ಸದಸ್ಯನಾಗಿ ಅಂಥ ಸ್ಥಾನದ ಪ್ರಕಾರ್ಯಗಳನ್ನು ನಿರ್ವಹಿಸುವುದು ನಿಂತು ಹೋಗತಕ್ಕದ್ದು ಮತ್ತು ಅಧಿನಿಯಮದ 12ನೇ, 124ನೇ ಮತ್ತು 167ನೇ ಪ್ರಕರಣದಲ್ಲಿ ಹೇಳಿರುವಂತೆ ಯಾವುದೇ ಪಂಚಾಯತ್‌ಗೆ ಮುಂದಿನ ಐದು ವರ್ಷಗಳವರೆಗೆ ಚುನಾವಣೆಗೆ ಸ್ಪರ್ಧಿಸಲು ಅನರ್ಹನಾಗತಕ್ಕದ್ದು."

**47. 175ಎ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 175ಎ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**175ಎ. ಸದಸ್ಯರಿಂದ ಆಸ್ತಿಗಳ ಮತ್ತು ಹೊಣೆಗಾರಿಕೆಗಳ ಘೋಷಣೆ:** (1) ಪ್ರತಿಯೊಬ್ಬ ಸದಸ್ಯನು, ತನ್ನ ಪದಾವಧಿಯ ಪ್ರಾರಂಭವಾದ ದಿನಾಂಕದಿಂದ ಮೂರು ತಿಂಗಳ ಒಳಗೆ ಮತ್ತು ಪ್ರತಿ ಕ್ಯಾಲೆಂಡರ್ ವರ್ಷದಲ್ಲಿ ಅವನ ಅಧಿಕಾರಾವಧಿ ಮುಗಿಯುವ ತನಕ ಮತ್ತು ಪ್ರತಿ ಆರ್ಥಿಕ ವರ್ಷ ಮುಕ್ತಾಯವಾದ ಒಂದು ತಿಂಗಳ ಒಳಗೆ ತಾನು ಮತ್ತು ತನ್ನ ಅವಿಭಕ್ತ ಕುಟುಂಬದ ಎಲ್ಲ ಸದಸ್ಯರು ಎರಡು ಲಕ್ಷಕ್ಕಿಂತ ಹೆಚ್ಚಿನ ಚರ ಮತ್ತು ಸ್ಥಿರ ಆಸ್ತಿಯನ್ನು ಮತ್ತು ಹೊಣೆಗಾರಿಕೆಯನ್ನು ಹೊಂದಿರುವುದರ ಬಗ್ಗೆ ರಾಜ್ಯ

ಚುನಾವಣಾ ಆಯೋಗದ ಮುಂದೆ ಘೋಷಣೆಯನ್ನು ನಿಯಮಿಸಬಹುದಾದಂಥ ನಮೂನೆಯಲ್ಲಿ ಸಂಬಂಧಪಟ್ಟ ಜಿಲ್ಲಾಪಂಚಾಯತ್‍ನ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯ ಮೂಲಕ ದಾಖಲು ಮಾಡತಕ್ಕದ್ದು:

ಪರಂತು, ಹಣಕಾಸು ವರ್ಷ ಮುಕ್ತಾಯವಾಗುವ ಎರಡು ತಿಂಗಳಿಗಿಂತ ಮೊದಲು ಅಂಥ ಸದಸ್ಯನ ಪದಾವಧಿಯು ಪ್ರಾರಂಭವಾದರೆ, ಅಂಥ ಸದಸ್ಯನು ಮುಂದಿನ ಹಣಕಾಸು ವರ್ಷ ಪ್ರಾರಂಭವಾದ ನಂತರ ಎರಡು ತಿಂಗಳೊಳಗೆ ತನ್ನ ಘೋಷಣೆಯನ್ನು ದಾಖಲು ಮಾಡತಕ್ಕದ್ದು.

(2) ಆಯಾ ಜಿಲ್ಲಾಪಂಚಾಯತ್‍ನ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯು, ಎಲ್ಲ ಸದಸ್ಯರು ದಾಖಲು ಮಾಡಿದ ಘೋಷಣೆಯನ್ನು ಸ್ವೀಕರಿಸತಕ್ಕದ್ದು ಮತ್ತು ಆ ವರ್ಷದ ಮೇ ಮೊದಲ ವಾರದಲ್ಲಿ ರಾಜ್ಯ ಚುನಾವಣಾ ಆಯೋಗಕ್ಕೆ ಕಳುಹಿಸತಕ್ಕದ್ದು ಮತ್ತು ತಡವಾಗಿ ಸಲ್ಲಿಸಿದ ಸಂದರ್ಭದಲ್ಲಿ, ವರ್ಷದ ಜುಲೈ ಮೊದಲನೆ ವಾರದಲ್ಲಿ ಘೋಷಣೆಯನ್ನು, ದಾಖಲು ಮಾಡಿದ ಸದಸ್ಯರ ಪಟ್ಟಿಯನ್ನು ಮತ್ತು ಘೋಷಣೆಯನ್ನು ಮಾಡದೆ ಇರುವಂಥ ಸದಸ್ಯರ ಪಟ್ಟಿಯನ್ನು ರಾಜ್ಯ ಚುನಾವಣಾ ಆಯೋಗಕ್ಕೆ ಕಳುಹಿಸತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಘೋಷಣೆಯನ್ನು ದಾಖಲು ಮಾಡಿರುವಂಥ ಸದಸ್ಯನು, ಆನಂತರ ಯಾವುದೇ ಸ್ವತ್ತನ್ನು ಅಥವಾ ಇತರ ಆಸ್ತಿಯನ್ನು ಆರ್ಜಿಸಿದರೆ ಅಥವಾ ವಿಲೆ ಮಾಡಿದರೆ, ಸಂದರ್ಭಾನುಸಾರವಾಗಿ ಹಾಗೆ ಸ್ವಾಧೀನಪಡಿಸಿಕೊಂಡ ಅಥವಾ ವಿಲೆ ಮಾಡಿದ ದಿನಾಂಕದಿಂದ ನಲವತ್ತೈದು ದಿವಸಗಳ ಒಳಗಾಗಿ ಆ ಬಗ್ಗೆ ಜಿಲ್ಲಾ ಪಂಚಾಯತ್‍ನ ಮುಖ್ಯಕಾರ್ಯನಿರ್ವಾಹಣಾಧಿಕಾಯ ಮೂಲಕ ರಾಜ್ಯ ಚುನಾವಣಾ ಆಯೋಗದ ಮುಂದೆ ಮತ್ತೆ ಘೋಷಣೆಯನ್ನು ದಾಖಲು ಮಾಡತಕ್ಕದ್ದು ಮತ್ತು ಮುಖ್ಯಕಾರ್ಯನಿರ್ವಾಹಣಾಧಿಕಾಯು (1)ನೇ ಉಪಪ್ರಕರಣದಲ್ಲಿ ಹೇಳಿರುವ ಅದೇ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

**175ಬಿ. ಸದಸ್ಯತ್ವವು ನಿಂತುಹೋಗುವುದು.–** (1) ಸದಸ್ಯನು 175ಎ ಪ್ರಕರಣದ ಅಡಿಯಲ್ಲಿ ಘೋಷಣೆಯನ್ನು ದಾಖಲು ಮಾಡದಿದ್ದರೆ ಅಥವಾ ಸುಳ್ಳು ಘೋಷಣೆಯನ್ನು ದಾಖಲ್ಮಾಡಿದ್ದಾನೆಂಬುದು ಕಂಡುಬಂದರೆ, ಆತನನ್ನು ದುರ್ನಡತೆಯ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ರಾಜ್ಯ ಚುನಾವಣಾ ಆಯುಕ್ತರು, ಅಹವಾಲನ್ನು ಹೇಳಿಕೊಳ್ಳಲು ಅವನಿಗೆ ಅವಕಾಶವನ್ನು ನೀಡಿದ ನಂತರ, ಅವನನ್ನು ಸದಸ್ಯತ್ವದಿಂದ ತೆಗೆದುಹಾಕತಕ್ಕದ್ದು ಮತ್ತು ಸಂದರ್ಭಾನುಸಾರ ಅವನ ಸ್ಥಾನವು ಖಾಲಿಯಾಗಿದೆ ಎಂದು ಘೋಷಿಸತಕ್ಕದ್ದು.

(2) ಸದಸ್ಯನು ಮಾನ್ಯತೆ ಪಡೆದ ರಾಜಕೀಯ ಪಕ್ಷದ ಪ್ರತಿನಿಧಿಯಾಗಿದ್ದು ಆತನ ಪಕ್ಷವು ನೀಡಿದ ವಿಪ್ ನೋಟೀಸನ್ನು ಪಡೆಯುವುದನ್ನು ತಪ್ಪಿಸಿಕೊಂಡಲ್ಲಿ ಅಥವಾ ಯಾವುದೇ ಸಭೆಯಲ್ಲಿ, ಆತನ ಪಕ್ಷವು ನೀಡಿದ ವಿಪ್‍ಗೆ ಅನುಸಾರವಾಗಿ ಮತದಾನ ಮಾಡಲು ನಿರಾಕರಿಸಿದಲ್ಲಿ ಅಥವಾ ವಿಪ್‍ನ್ನು ಉಲ್ಲಂಘನೆ ಮಾಡಿ, ಮತದಾನ ಮಾಡಿದಲ್ಲಿ, ರಾಜ್ಯ ಚುನಾವಣಾ ಆಯೋಗವು ಆತನನ್ನು ಸದಸ್ಯತ್ವದಿಂದ ತೆಗೆದುಹಾಕತಕ್ಕದ್ದು ಮತ್ತು ಆತನ ಸ್ಥಾನವು ಖಾಲಿಯಾಗಿದೆ ಎಂದು ಘೋಷಿಸತಕ್ಕದ್ದು."

**48. 178ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 178ನೇ ಪ್ರಕರಣದ (1)ನೇ ಉಪಪ್ರಕರಣದ ತರುವಾಯ ಈ ಮುಂದಿನಂತೆ ಸೇರಿಸತಕ್ಕದ್ದು, ಎಂದರೆ:–

"ಪರಂತು, ಜಿಲ್ಲಾ ಪಂಚಾಯತಿಯ ಅಧ್ಯಕ್ಷರು ರಾಜ್ಯ ಸಚಿವರ ಸ್ಥಾನಮಾನವನ್ನು ಹೊಂದಿರತಕ್ಕದ್ದು ಮತ್ತು ನಿಯಮಿಸಬಹುದಾದಂಥ ಸಂಬಳ, ಅಥವಾ ಇನ್ನಿತರ ಉಪಲಬ್ಧಿಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು."

**49. 179ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 179ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ,–

(i) "ಆ ಉದ್ದೇಶಕ್ಕಾಗಿ ವಿಶೇಷವಾಗಿ ಕರೆದ ಸಭೆಯಲ್ಲಿ ಜಿಲ್ಲಾ ಪಂಚಾಯತಿಯ ಚುನಾಯಿತ ಸದಸ್ಯರ ಒಟ್ಟು ಸಂಖ್ಯೆಯ ಬಹುಮತದಿಂದ" ಎಂಬ ಪದಗಳಿಗೆ, "ಅರ್ಧದಷ್ಟು ಚುನಾಯಿತ ಸದಸ್ಯರು ನೋಟೀಸನ್ನು ನೀಡಿದ ತರುವಾಯ ಮತ್ತು ಒಟ್ಟು ಚುನಾಯಿತ ಸದಸ್ಯರ ಪೈಕಿ ಮೂರನೇ ಎರಡು ಭಾಗದಷ್ಟು ಬಹುಮತದಿಂದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) ಪರಂತುಕದಲ್ಲಿರುವ "ಆರು ತಿಂಗಳುಗಳೊಳಗೆ" ಎಂಬ ಪದಗಳಿಗೆ "ಮೂವತ್ತು ತಿಂಗಳೊಳಗೆ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.;

(iii) ಎರಡನೇ ಪರಂತುಕದಲ್ಲಿರುವ "ಆರು ತಿಂಗಳುಗಳೊಳಗೆ" ಎಂಬ ಪದಗಳಿಗೆ "ಎರಡು ವರ್ಷಗಳೊಳಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**50. 182ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 182ನೇ ಪ್ರಕರಣದ ಶೀರ್ಷಿಕೆಯಲ್ಲಿ ಮತ್ತು ಪ್ರಕರಣದಲ್ಲಿ ಅನುಕ್ರಮವಾಗಿ ಬರುವ "ಸರ್ಕಾರಿ ಅಧಿಕಾರಿಗಳ" ಮತ್ತು "ಯಾವೊಬ್ಬ ಸರ್ಕಾರಿ ಅಧಿಕಾರಿಯ" ಎಂಬ ಪದಗಳಿಗೆ "ಸರ್ಕಾರವು ಅಧಿಸೂಚಿಸಬಹುದಾದಂತೆ ಸರ್ಕಾರದ ಅಥವಾ ಯಾವುದೇ ಸರ್ಕಾರಿ ಸಮಿತಿಯ ಅಥವಾ ಕಂಪನಿಯ ಅಥವಾ ನಿಗಮದ ಅಧಿಕಾರಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**51. 184ನೇ ಪ್ರಕರಣದ ತಿದ್ದುಪಡಿ.–**ಮೂಲ ಅಧಿನಿಯಮದ 184ನೇ ಪ್ರಕರಣದಲ್ಲಿ (2)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಜಿಲ್ಲಾ ಪಂಚಾಯತಿಯು ಸ್ಥಳೀಯ ಸ್ವಯಮಾಡಳಿತದ ಸರ್ಕಾರದ ಒಂದು ಘಟಕವಾಗಿರತಕ್ಕದ್ದು ಮತ್ತು ರಾಜ್ಯವು, ಜಿಲ್ಲಾ ಪಂಚಾಯತಿಯು ಸ್ವಯಂ–ಸರ್ಕಾರದ ಸಂಸ್ಥೆಯಂತೆ ಕಾರ್ಯನಿರ್ವಹಿಸಲು ಸಾಧ್ಯವಾಗುವಂತೆ ಅದಕ್ಕೆ ಅವಶ್ಯವಿರಬಹುದಾದ ಅಧಿಕಾರಗಳು, ಪ್ರಾಧಿಕಾರ, ಪ್ರಕಾರ್ಯಗಳು, ಸಿಬ್ಬಂದಿ ವರ್ಗದವರು ಮತ್ತು ನಿಧಿಗಳನ್ನು ಒದಗಿಸತಕ್ಕದ್ದು.

(4) ಪಂಚಾಯತಿ ಪ್ರದೇಶದ ಜನತೆಯ ಅವಶ್ಯಕತೆಗಳನ್ನು ಪೂರೈಸುವುದು ಪ್ರತಿಯೊಂದು ಜಿಲ್ಲಾ ಪಂಚಾಯತಿಯ ಕರ್ತವ್ಯವಾಗಿರತಕ್ಕದ್ದು ಮತ್ತು ಅನುಸೂಚಿ–IIIರಲ್ಲಿ ನಮೂದಿಸಿರುವ ವಿಷಯಗಳು ಮತ್ತು ಜಿಲ್ಲಾ ಪಂಚಾಯತಿಗಳಿಗೆ ಸಂಬಂಧಿಸಿದ ಜವಾಬ್ದಾರಿ ನಕ್ಷೆಯಲ್ಲಿ ತಿಳಿಸಲಾದಂತೆ ಮತ್ತು ಜಿಲ್ಲಾ ಪಂಚಾಯತಿ ನಿಧಿ ಅನುಮತಿಸುವಷ್ಟರ ಮಟ್ಟಿಗೆ, ಸರ್ವರಿಗೂ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವ ನಿಟ್ಟಿನಲ್ಲಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಭಿವೃದ್ಧಿ ಪರ ಯೋಜನೆಗಳನ್ನು ಸಿದ್ಧಪಡಿಸುವ ಮತ್ತು ಅವುಗಳನ್ನು ಅನುಷ್ಠಾನಗೊಳಿಸುವ ವಿಷಯಗಳನ್ನು ನಿರ್ವಹಿಸುವ ಅಧಿಕಾರಗಳನ್ನು ಹೊಂದಿರತಕ್ಕದ್ದು.

(5) ಜಿಲ್ಲಾ ಪಂಚಾಯತಿಯು ಪಂಚಾಯತಿ ಪ್ರದೇಶದ ಅವಶ್ಯಕತೆಗಳನ್ನು ಪೂರೈಸತಕ್ಕದ್ದು ಮತ್ತು ಗ್ರಾಮ ಪಂಚಾಯತಿ ಮತ್ತು ತಾಲೂಕು ಪಂಚಾಯತಿಗಳ ಅಗತ್ಯತೆಗಳು ಮತ್ತು ಕೋರಿಕೆಗಳಿಗೆ ಸ್ಪಂದಿಸತಕ್ಕದ್ದು ಮತ್ತು ಅನುಸೂಚಿ–IIIರಲ್ಲಿ ನಮೂದಿಸಲಾಗಿರುವ ವಿಷಯಗಳಿಗೆ ಸಂಬಂಧಪಟ್ಟಂತೆ ಪ್ರದೇಶಕ್ಕೆ ಅಗತ್ಯವಿರಬಹುದಾದ ನೆರವನ್ನು ನೀಡತಕ್ಕದ್ದು.

(6) ಅಧಿನಿಯಮದಲ್ಲಿ ಹೇಳಲಾದ ಯೋಜಿತ ಯೋಜನಾ ಪ್ರಕ್ರಿಯೆಗಳಲ್ಲಿ ತಾನಾಗಿಯೇ ತೊಡಗಿಸಿಕೊಳ್ಳುವುದು ಜಿಲ್ಲಾ ಪಂಚಾಯತಿಯ ಹೊಣೆಗಾರಿಕೆಯಾಗಿರತಕ್ಕದ್ದು."

**52. 191ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 191ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ (ಡಿ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಇ) ಜಿಲ್ಲಾ ಪಂಚಾಯತಿಯು, ಅನುಸೂಚಿ–IIIರಲ್ಲಿ ನಮೂದಿಸಿರುವ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಸರ್ಕಾರದಿಂದ ಹಂಚಿಕೆಯಾದ ನಿಧಿಗಳೊಂದಿಗೆ ತನಗೆ ವಹಿಸಿಕೊಟ್ಟಿರುವ ಕರ್ತವ್ಯಗಳು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

(i) ಗ್ರಾಮದಲ್ಲಿ ವಾಸಿಸುತ್ತಿರುವ ಎಲ್ಲ ನಿವಾಸಿಗಳ ಸುರಕ್ಷತೆ, ಸುಭದ್ರತೆ, ಸ್ವಾತಂತ್ರ್ಯ ಮತ್ತು ಹಕ್ಕುಗಳನ್ನು ಖಚಿತಪಡಿಸಲು ತಾಲೂಕು ಮತ್ತು ಗ್ರಾಮ ಪಂಚಾಯತಿಗಳಿಗೆ ನೆರವು ನೀಡುವುದು.

(ii) ಸಮುದಾಯ ಆರೋಗ್ಯ ಕೇಂದ್ರಗಳು ಮತ್ತು ಜಿಲ್ಲಾ ಮಟ್ಟದಲ್ಲಿರುವ ಜಿಲ್ಲಾ ಆಸ್ಪತ್ರೆಗಳನ್ನು ನಿರ್ವಹಿಸುವುದು ಮತ್ತು ಜಿಲ್ಲಾ ಮಟ್ಟದಲ್ಲಿ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ಅವರನ್ನು ಸಬಲರನ್ನಾಗಿ ಮಾಡುವ ಕಾರ್ಯಕ್ರಮಗಳೂ ಸೇರಿದಂತೆ ವಿಶೇಷ ಪ್ರವರ್ಗಗಳ ಹಾಗೂ ವಿಕಲಚೇತನರ ಬಗ್ಗೆ ಕಾಳಜಿ ವಹಿಸುವತ್ತ ಯುಕ್ತ ಗಮನ ನೀಡುವುದರೊಂದಿಗೆ ಅಗತ್ಯವಿರುವ ಎಲ್ಲ ಪೂರಕ ಪ್ರಕಾರ್ಯಗಳನ್ನು ನಿರ್ವಹಿಸುವುದು.

(iii) ಪ್ರಥಮ ದರ್ಜೆ ಕಾಲೇಜುಗಳು, ಪದವಿ ಪೂರ್ವ ಕಾಲೇಜುಗಳು, ಪಾಲಿಟೆಕ್ನಿಕ್‌ಗಳು, ಕೈಗಾರಿಕಾ ತರಬೇತಿ ಸಂಸ್ಥೆಗಳು, ಆಶ್ರಮ ಶಾಲೆಗಳು, ವಸತಿ ನಿಲಯಗಳು, ಅನಾಥಾಶ್ರಮಗಳು, ಯುವಜನತೆ ಮತ್ತು ಗ್ರಾಮೀಣ ಕುಶಲಕರ್ಮಿಗಳಿಗಾಗಿ ಸರ್ಕಾರಿ ಕೈಗಾರಿಕಾ, ತಾಂತ್ರಿಕ ಮತ್ತು ವೃತ್ತಿ ತರಬೇತಿ ಸಂಸ್ಥೆಗಳು ಹಾಗೂ ಶೈಕ್ಷಣಿಕ ಕೇಂದ್ರಗಳನ್ನು ನಿರ್ವಹಿಸುವುದು ಮತ್ತು ಅಂತರ್ಜಾಲ ಸೌಕರ್ಯಗಳುಳ್ಳ ಗ್ರಂಥಾಲಯಗಳ ಮೂಲಕ ಮಾಹಿತಿಯನ್ನು ಪಡೆಯಲು ಅವಕಾಶವನ್ನು ಕಲ್ಪಿಸುವುದು.

(iv) ಪ್ರವಾಸಿ ತಾಣಗಳನ್ನು ಅಭಿವೃದ್ಧಿಪಡಿಸಲು ಮತ್ತು ಅವುಗಳನ್ನು ಬಲಪಡಿಸಲು ತಾಲೂಕು ಮತ್ತು ಗ್ರಾಮ ಪಂಚಾಯತಿಗಳಿಗೆ ನೆರವು ನೀಡುವುದು, ಖಾದಿ ಮತ್ತು ಗ್ರಾಮೋದ್ಯೋಗಗಳಿಗೆ ಉತ್ತೇಜನ ನೀಡುವುದು, ಆಹಾರ ದಾಸ್ತಾನು, ಸಂಸ್ಕರಣೆ ಹಾಗೂ ಮಾರುಕಟ್ಟೆ ಮಳಿಗೆಗಳನ್ನು ಸ್ಥಾಪಿಸುವುದು ಮತ್ತು ಸ್ವಯಂ ಉದ್ಯೋಗಾವಕಾಶಗಳನ್ನು ಸೃಜಿಸುವುದು ಮತ್ತು ಗ್ರಾಮೀಣ ಉದ್ಯಮಗಳು ಹಾಗೂ ಸಹಕಾರ ಸಂಘ ಸಂಸ್ಥೆಗಳ ಮೂಲಕ ಬಡತನವನ್ನು ನಿವಾರಿಸುವುದು.

(v) ಮಹಿಳೆಯರು ನಡೆಸುವ ಸಣ್ಣಪುಟ್ಟ ವ್ಯವಹಾರಗಳು, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳನ್ನು ಉತ್ತೇಜಿಸಲು ತಾಲೂಕು ಮಟ್ಟದಲ್ಲಿ ಮಹಿಳಾ ಸಹಕಾರಿ ಬ್ಯಾಂಕುಗಳು ಅಥವಾ ಮಹಿಳೆಯರಿಗಾಗಿಯೇ ಪ್ರತ್ಯೇಕವಾಗಿ ಸಂಘ ಸಂಸ್ಥೆಗಳನ್ನು ಸ್ಥಾಪಿಸಿ ನಿರ್ವಹಿಸಲು ತಾಲೂಕು ಪಂಚಾಯತಿಗಳಿಗೆ ಉತ್ತೇಜನ ಮತ್ತು ಬೆಂಬಲ ನೀಡುವುದು.

(vi) ಪ್ರದೇಶದ ಜೀವ ವೈವಿಧ್ಯತೆ ಮತ್ತು ಜೀವಿ ಪರಿಸರವನ್ನು ಸಂರಕ್ಷಿಸಲು, ಕಾಪಾಡಲು ಮತ್ತು ಪೋಷಿಸುವ ನಿಟ್ಟಿನಲ್ಲಿ ತಾಂತ್ರಿಕ ಮತ್ತು ಮೂರ್ತ ಸ್ವರೂಪದ ಬೆಂಬಲವನ್ನು ನೀಡುವ ಮೂಲಕ ತಾಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿಗಳಿಗೆ ನೆರವು ನೀಡುವುದು ಮತ್ತು ಸಾಮಾಜಿಕ ಅರಣ್ಯವನ್ನು ನಿರ್ಮಿಸುವ ನಿಟ್ಟಿನಲ್ಲಿ ಯೋಜಿಸುವುದು ಮತ್ತು ಬಹುಹಳ್ಳಿಗಳ ಘನ ಮತ್ತು ದ್ರವ ತ್ಯಾಜ್ಯ ನಿರ್ವಹಣಾ ಸ್ಥಾವರಗಳನ್ನು ನಿರ್ವಹಿಸುವುದು ಮತ್ತು ವಿಶೇಷವಾಗಿ ಬೇಸಿಗೆಕಾಲದಲ್ಲಿ ಸಾಕಷ್ಟು ಕುಡಿಯುವ ನೀರನ್ನು ಖಾತ್ರಿಪಡಿಸಲು ಕುಡಿಯುವ ನೀರಿನ ಬಾವಿಗಳ ಆಸುಪಾಸಿನಲ್ಲಿ ನೀರಾವರಿ ಕೊಳವೆ ಬಾವಿಗಳ ಕೊರೆಯುವುದನ್ನು ತಡೆಗಟ್ಟುವುದು.

(vii) ಜಿಲ್ಲಾ ಮಟ್ಟದಲ್ಲಿ ಜಾತ್ರೆಗಳನ್ನು, ಮೇಳಗಳನ್ನು ಮತ್ತು ಪ್ರದರ್ಶನಗಳನ್ನು ಏರ್ಪಡಿಸುವ ಮೂಲಕ ಗ್ರಾಮೀಣ ಕೃಷಿ ಮತ್ತು ಕೈಗಾರಿಕಾ ಉತ್ಪನ್ನಗಳು, ಉತ್ಪತ್ತಿ ಮತ್ತು ಜಾನುವಾರುಗಳ ವ್ಯಾಪಾರವನ್ನು ಉತ್ತೇಜಿಸುವುದು.

(viii) ಶುದ್ಧ ಕುಡಿಯುವ ನೀರು, ಶೌಚಾಲಯಗಳು ಮತ್ತು ವಿದ್ಯುತ್ ಪೂರೈಕೆ ವ್ಯವಸ್ಥೆಯನ್ನು ಕಲ್ಪಿಸುವ ನಿಟ್ಟಿನಲ್ಲಿ ತಾಲೂಕು ಮತ್ತು ಗ್ರಾಮ ಪಂಚಾಯತಿಗಳನ್ನು ಸದೃಢಗೊಳಿಸುವುದು ಮತ್ತು ಈ ಮುಂದಿನವುಗಳಿಗಾಗಿ ತಾಂತ್ರಿಕ ನೆರವನ್ನು ಒದಗಿಸುವುದೂ ಸೇರಿದಂತೆ ಅದನ್ನು ಖಾತರಿಪಡಿಸಲು ಅಗತ್ಯವಿರುವ ಮೂಲಸೌಕರ್ಯಗಳನ್ನು ಒದಗಿಸುವುದು, ಎಂದರೆ:–

(ಎ) ಕುಡಿಯುವ ನೀರಿನ ಬಾವಿಗಳಲ್ಲಿ ನೀರಿನ ಲಭ್ಯತೆಯನ್ನು ಖಚಿತಪಡಿಸಲು ಅಂತರ್ಜಲ ಮರುಪೂರಣ ಸಂರಚನೆಗಳನ್ನು ನಿರ್ಮಿಸುವುದು ;

(ಬಿ) ಕುಡಿಯುವ ನೀರಿನ ಯೋಜನೆಗಳನ್ನು ನಿರ್ವಹಿಸುವುದು, ನೀರು ಪರೀಕ್ಷಾ ಪ್ರಯೋಗಾಲಯಗಳನ್ನು ಸ್ಥಾಪಿಸುವುದು ಮತ್ತು ಅಂತರ್ಜಲ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸುವುದು; ಮತ್ತು

(ಸಿ) ಸಣ್ಣ ನೀರಾವರಿ ಯೋಜನೆಗಳನ್ನು ಮತ್ತು ಸಾಂಪ್ರದಾಯಿಕ ಹಾಗೂ ಸಾಂಪ್ರದಾಯಿಕವಲ್ಲದ ಇಂಧನ ಮಾರಾಟವೂ ಸೇರಿದಂತೆ ಸಾಂಪ್ರದಾಯಿಕ ಹಾಗೂ ಸಾಂಪ್ರದಾಯಿಕವಲ್ಲದ ಇಂಧನ ಘಟಕಗಳನ್ನು ನಿರ್ವಹಿಸುವುದು.

(ix) ಜಿಲ್ಲಾ, ತಾಲೂಕು ಮತ್ತು ಗ್ರಾಮ ಪಂಚಾಯತಿಗಳ ಉಪಯೋಗಕ್ಕಾಗಿ ನಿರ್ಮಿಸುವ ಮನೆ, ಶಾಲೆಗಳ ನಿರ್ಮಾಣ ಹಾಗೂ ಎಲ್ಲ ಲೋಕೋಪಯೋಗಿ ಕಾಮಗಾರಿಗಳನ್ನು ನಿರ್ವಹಿಸಲು ಕಡಿಮೆ ವೆಚ್ಚದ, ದೇಶೀಯ, ಕಾರ್ಯಸಾಧ್ಯವಾದ ಹಾಗೂ ಸುಸ್ಥಿರವಾದ ತಾಂತ್ರಿಕತೆಗಳನ್ನು ಗುರುತಿಸುವುದು, ದಾಖಲಿಸುವುದು ಹಾಗೂ ಪ್ರಚಾರ ಮಾಡುವುದು ಮತ್ತು ರಸ್ತೆ, ಸೇತುವೆಗಳು, ಅಡಿಗಾಲುವೆಗಳು, ಚರಂಡಿಗಳು, ಮೊದಲಾದವುಗಳ ಬಗ್ಗೆ ಯೋಜನೆ ರೂಪಿಸುವುದು, ನಿರ್ಮಾಣ ಮಾಡುವುದು ಮತ್ತು

ನಿರ್ವಹಿಸುವುದು ಮತ್ತು ಜಿಲ್ಲಾ ಮಟ್ಟದಲ್ಲಿ ದೋಣಿಗಳು, ದೋಣಿ ದಾಟುವ ಸ್ಥಳಗಳು ಮತ್ತು ಜಲ ಮಾರ್ಗಗಳನ್ನು ನಿರ್ವಹಿಸುವುದು ;

(x) ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಹಾಗೂ ಗ್ರಾಮಗಳಲ್ಲಿ ಸಾಂಕ್ರಾಮಿಕ ರೋಗ ಮತ್ತು ವಿಪತ್ತು ನಿರ್ವಹಣಾ ವ್ಯವಸ್ಥೆಗಳು ಹಾಗೂ ವಿಪತ್ತು ನಿರ್ವಹಣಾ ಸಿದ್ಧತೆಗಳನ್ನು ಅನುಷ್ಠಾನಗೊಳಿಸಲು ಸಂಬಂಧಪಟ್ಟ ಪ್ರಾಧಿಕಾರಗಳಿಗೆ ನೆರವು ನೀಡುವುದು ಮತ್ತು ಅಪಾಯಗಳನ್ನು ನಿರ್ಧರಿಸುವುದು ಮತ್ತು ಸಂಭವನೀಯ ಎಲ್ಲ ಬಗೆಯ ವಿಪತ್ತುಗಳಿಗೆ ವೈದ್ಯಕೀಯ ಮತ್ತಿತರ ಅಗತ್ಯತೆಗಳಾದಂಥ ಸಾಮರ್ಥ್ಯ ಸಂವರ್ಧನೆ ಮತ್ತು ಸಂಪನ್ಮೂಲ ಲಭ್ಯತೆಯನ್ನೊಳಗೊಂಡ ವಿಪತ್ತು ನಿರ್ವಹಣಾ ನೀತಿ ನಿಯಮಾವಳಿಗಳನ್ನು ರೂಪಿಸುವುದು ಮತ್ತು ತಾಲೂಕು ಹಾಗೂ ಗ್ರಾಮ ಪಂಚಾಯತಿಗಳು, ಸರ್ಕಾರೇತರ ಸಂಘಸಂಸ್ಥೆಗಳು ಮತ್ತು ಸಂಬಂಧಪಟ್ಟ ಕ್ಷೇತ್ರಗಳ ತಜ್ಞರ ಸಹಕಾರ ಮತ್ತು ಸಹಯೋಗವನ್ನು ಪಡೆಯುವುದು .

(xi) ಜಿಲ್ಲಾ ಮಟ್ಟದಲ್ಲಿ ಸಮಾಜದ ಎಲ್ಲ ವರ್ಗಗಳ ಪರಂಪರಾನುಗತ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಲಾ ಪ್ರಕಾರಗಳು, ಕ್ರೀಡೆಗಳು, ಕರಕುಶಲಗಳ ಕಲೆಗಳು, ಕೌಶಲಗಳು ಮತ್ತು ಆಚರಣೆಗಳನ್ನು ಉತ್ತೇಜಿಸುವುದು, ಜೋಪಾನ ಮಾಡುವುದು ಮತ್ತು ಪ್ರದರ್ಶಿಸುವುದು.

(xii) ಸಂಬಂಧಪಟ್ಟ ಎಲ್ಲಾ ಸಮಾಜೋ – ಆರ್ಥಿಕ ಮಾಹಿತಿಯ ಡೇಟಾಬೇಸನ್ನು ಕ್ರೋಢೀಕರಿಸುವುದು, ಮೇಲ್ವಿಚಾರಣೆ ಮಾಡುವುದು ಮತ್ತು ನಿರ್ವಹಿಸುವುದು ಮತ್ತು ಪ್ರದೇಶದಲ್ಲಿರುವ ಎಲ್ಲ ಸ್ವಾಭಾವಿಕ ಹಾಗೂ ಇತರ ಸಂಪನ್ಮೂಲಗಳು ಮತ್ತು ಆಸ್ತಿಗಳ ನಕ್ಷೆಯನ್ನು ರೂಪಿಸುವುದು ಮತ್ತು ಪ್ರತಿಯೊಂದು ಗ್ರಾಮ ಪಂಚಾಯತಿಗಳಲ್ಲಿ ನಡೆಸಲಾಗುವ ಸಮೀಕ್ಷೆಗಳು ಮತ್ತು ಸಹಭಾಗಿತ್ವ ಗ್ರಾಮೀಣ ಪರಾಮರ್ಶೆಗಳ ಫಲಿತಾಂಶವಾಗಿ ಪಡೆಯುವ ಮಾಹಿತಿ ಮತ್ತು ಪ್ರತಿಯೊಂದು ತಾಲೂಕು ಹಾಗೂ ಜಿಲ್ಲಾ ಪಂಚಾಯತಿಯು ನಡೆಸುವ ಸಮೀಕ್ಷೆಗಳು ಮತ್ತು ದತ್ತಾಂಶ ಸಂಗ್ರಹಣೆಯೂ ಸೇರಿದಂತೆ ಅವುಗಳನ್ನು ನಿಯತಕಾಲಿಕವಾಗಿ ಇಂದೀಕರಿಸಿ ಅಳವಡಿಸತಕ್ಕದ್ದು.

(xiii) ತನ್ನ ವ್ಯಾಪ್ತಿಯ ಒಳಗಡೆ ಶಿಕ್ಷಣ ಅಥವಾ ವೈದ್ಯಕೀಯ ಪರಿಹಾರದ ಮೇಲೆ ಮಾಡಿರುವ ವೆಚ್ಚವನ್ನು ಭರಿಸುವುದು;

(xiv) ಜಿಲ್ಲೆಯ ನಿವಾಸಿಗಳ ಆರೋಗ್ಯ, ಸುರಕ್ಷತೆ, ಶಿಕ್ಷಣ, ಸವಲತ್ತು, ಅನುಕೂಲ ಅಥವಾ ಸಾಮಾಜಿಕ ಅಥವಾ ಆರ್ಥಿಕ ಅಥವಾ ಸಾಂಸ್ಕೃತಿಕ ಹಿತಾಸಕ್ತಿಯನ್ನು ಉತ್ತೇಜಿಸುವಂಥ ಯಾವುದೇ ಕಾಮಗಾರಿಯನ್ನು ಕೈಗೊಳ್ಳಲು ಅಥವಾ ತತ್ಸಂಬಂಧ ಕ್ರಮಕೈಗೊಳ್ಳಲು ಅವಕಾಶ ಕಲ್ಪಿಸುವುದು;

(xv) ಸ್ಥಳೀಯ ಸ್ವಯಂ ಸರ್ಕಾರದ ಪ್ರವರ್ತನೆಗೆ ಸಂಬಂಧಪಟ್ಟಂತೆ ರಾಷ್ಟ್ರ, ರಾಜ್ಯ ಅಥವಾ ಅಂತರರಾಜ್ಯ ಮಟ್ಟ ಎಲ್ಲ ಸಂಘಸಂಸ್ಥೆಗಳಿಗೆ ಮತ್ತು ಗ್ರಾಮ ಪಂಚಾಯತಿ, ತಾಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಜಿಲ್ಲೆಯೊಳಗಿನ ವಸ್ತು ಪ್ರದರ್ಶನಗಳು, ವಿಚಾರ ಸಂಕಿರಣಗಳು ಮತ್ತು ಕಾರ್ಯಾಗಾರಗಳನ್ನು ನಡೆಸಲು, ಸಂಬಂಧಪಟ್ಟ ಕೊಡುಗೆಯನ್ನು ನೀಡುವುದು;

(xvi) ಸದರಿ ಸಂಸ್ಥೆಯ ಯಾವುದೇ ಪ್ರಕಾರ್ಯಗಳಿಗೆ ಸಂಬಂಧಿಸಿದಂತೆ ಮೇಲೆ ನಿರ್ದಿಷ್ಟಪಡಿಸಿರುವಂಥ ಯಾವುದೇ ಕಾರ್ಯಚಟುವಟಿಕೆಯನ್ನು ಜಿಲ್ಲೆಯಲ್ಲಿ ನಡೆಸಲು ಯಾವೊಬ್ಬ ವ್ಯಕ್ತಿಗೆ ಹಣಕಾಸಿನ ಅಥವಾ ಇನ್ನಿತರ ನೆರವನ್ನು ಒದಗಿಸುವುದು; ಮತ್ತು

(xvii) ಪ್ರದೇಶದ ನಿವಾಸಿಗಳಿಗೆ ಕಿರುಕುಳವನ್ನು ಉಂಟುಮಾಡುವ ಅಥವಾ ಅಪಾಯವನ್ನುಂಟು ಮಾಡುವ ಅಕ್ರಮ ಗಣಿಗಾರಿಕೆ, ಕೊಳವೆ ಬಾವಿಗಳನ್ನು ಕೊರೆಯುವುದು, ತೆರೆದ ಬಾವಿಗಳು ಅಥವಾ ಕೆರೆಗಳನ್ನು ತೋಡುವ ಕೃತ್ಯಗಳನ್ನು ಸಂಬಂಧಪಟ್ಟ ಪ್ರಾಧಿಕಾರಕ್ಕೆ ವರದಿ ಮಾಡುವುದು."

**53. 193ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 193ನೇ ಪ್ರಕರಣದ (ಇ) ಖಂಡದಲ್ಲಿ "ಒಂದು ಲಕ್ಷ ರೂಪಾಯಿಗಳವರೆಗೆ" ಎಂಬ ಪದಗಳಿಗೆ "ಐದು ಲಕ್ಷ ರೂಪಾಯಿಗಳವರೆಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**54. 195ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 195ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು. ಎಂದರೆ :–

**"195. ಕರಾರುಗಳನ್ನು ಮಾಡಿಕೊಳ್ಳುವ ವಿಧಾನ.–** (1) ಕಾಮಗಾರಿಗಳ ನಿರ್ವಹಣೆಗೆ ಅಥವಾ ಸರಕುಗಳು ಮತ್ತು ಸೇವೆಗಳನ್ನು ಒದಗಿಸುವುದಕ್ಕಾಗಿ ಜಿಲ್ಲಾ ಪಂಚಾಯತ್ ಪರವಾಗಿ ಮಾಡಿಕೊಳ್ಳುವ ಪ್ರತಿಯೊಂದು ಕರಾರು ಅಥವಾ ಒಪ್ಪಂದವು, ಈ ಪ್ರಕರಣದ ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಉಪಬಂಧಗಳ ಅನುಸಾರ ಇರತಕ್ಕದ್ದು.

(2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಉಪಬಂಧಗಳ ಅಡಿಯಲ್ಲಿ ಯಾವ ವಿಷಯಗಳಿಗೆ ಸಂಬಂಧಪಟ್ಟಂತೆ ಜಿಲ್ಲಾ ಪಂಚಾಯತ್‌ನ ಪರವಾಗಿ ಕರಾರನ್ನು ಅಥವಾ ಒಪ್ಪಂದವನ್ನು ಮಾಡಿಕೊಳ್ಳಲು ಅಧಿಕಾರ ಹೊಂದಿರುವನೋ ಆ ವಿಷಯಗಳಿಗೆ ಸಂಬಂಧಪಟ್ಟಂತೆ ಜಿಲ್ಲಾ ಪಂಚಾಯತ್‌ನ ಪರವಾಗಿ ಕರಾರನ್ನು ಅಥವಾ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು ಮತ್ತು ಸರ್ಕಾರವು ಕಾಲಕಾಲಕ್ಕೆ ಕರಾರಿಗೆ ಅಥವಾ ಒಪ್ಪಂದಕ್ಕೆ ಎಷ್ಟು ಮೌಲ್ಯದ ಹಣವನ್ನು ನಿಗದಿ ಮಾಡುತ್ತದೋ ಅಷ್ಟು ಹಣಕ್ಕೆ ಅಂಥ ಕರಾರನ್ನು ಮತ್ತು ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು."

**55. 199ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ (1)ನೇ ಪ್ರಕರಣದಲ್ಲಿ,–

(i) (1)ನೆಯ ಉಪ–ಪ್ರಕರಣದಲ್ಲಿ, **"ಕಟ್ಟಡಗಳ ಮತ್ತು ಭೂಮಿಗಳ ಮೇಲೆ"** ಎಂಬ ಪದಗಳಿಗೆ **", ಸ್ವತ್ತಿನ ಬಂಡವಾಳ ಮೌಲ್ಯದ ಆಧಾರದಲ್ಲಿ"** ಎಂಬ ಪದಗಳನ್ನು ಮತ್ತು ಅಲ್ಪವಿರಾಮ ಚಿಹ್ನೆಯನ್ನು ಸೇರಿಸತಕ್ಕದ್ದು.

(ii) (3)ನೇ ಉಪಪ್ರಕರಣದಲ್ಲಿ, (ಹೆಚ್) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ,–

"(ಐ) ತೆರಿಗೆ ಮತ್ತು ಶುಲ್ಕ ಅನುಸೂಚಿ–IVರಲ್ಲಿ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದು;

(ಜೆ) ನಿಯಮಿಸಬಹುದಾಂಥ ಯಾವುದೇ ಇತರ ಶುಲ್ಕ."

**56. 199ಎ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 199ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**199ಎ. ತೆರಿಗೆಗಳು ಮತ್ತು ದರಗಳ ಪರಿಷ್ಕರಣೆ.–** ಗ್ರಾಮಪಂಚಾಯತಿಯು 199ನೇ ಪ್ರಕರಣದ ಅಡಿಯಲ್ಲಿ ವಿಧಿಸಬಹುದಾದ ತೆರಿಗೆಗಳು ಮತ್ತು ದರಗಳನ್ನು, ಕಟ್ಟಡಗಳು ಮತ್ತು ಭೂಮಿಯ ಸಂಬಂಧದಲ್ಲಿ ಕನಿಷ್ಠ ಎರಡು ವರ್ಷಗಳಿಗೊಮ್ಮೆ ಮತ್ತು IVನೇ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಇತರ ಬಾಬುಗಳ ಮೇಲೆ ವರ್ಷದಲ್ಲಿ ಕನಿಷ್ಠ ಒಮ್ಮೆ ಪರಿಷ್ಕರಿಸಬಹುದು."

**57. 200ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 200ನೇ ಪ್ರಕರಣದಲ್ಲಿ (6)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು. ಎಂದರೆ.–

"(7) (6)ನೇ ಉಪಪ್ರಕರಣದ ಅಡಿಯಲ್ಲಿಯ ಬಾಕಿಗಳನ್ನು ಹೊರತುಪಡಿಸಿ, ಗ್ರಾಮಪಂಚಾಯತ್‌ಗೆ ಸಲ್ಲಿಕೆ ಆಗಬೇಕಾಗಿರುವ ತೆರಿಗೆಗಳ ವಸೂಲಿ ಮಾಡುವುದು ಪಂಚಾಯತ್‌ಗಳ ಪ್ರಾಥಮಿಕ ಹೊಣೆಗಾರಿಕೆಯಾಗತಕ್ಕದ್ದು ಮತ್ತು ವಸೂಲು ಆಗಬೇಕಾಗಿರುವ ತೆರಿಗೆಯಲ್ಲಿ ಶೇಕಡಾ ಎಂಬತ್ತರಷ್ಟು ಕಡಿಮೆ ವಸೂಲಾತಿ ಆಗಿದ್ದರೆ ಹಾಗೆ ಕಡಿಮೆ ವಸೂಲಾತಿ ಆಗಿರುವುದಕ್ಕೆ ಕಾರಣಗಳ ಬಗ್ಗೆ ಪಂಚಾಯತ್ ತನಿಖೆ ಮಾಡತಕ್ಕದ್ದು ಮತ್ತು ಅವಶ್ಯಕ ಕ್ರಮ ತೆಗೆದುಕೊಳ್ಳತಕ್ಕದ್ದು".

**58. 206ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 206ನೇ ಪ್ರಕರಣದಲ್ಲಿ, ಪ್ರಸ್ತುತ ಇರುವ ಪ್ರಕರಣಕ್ಕೆ (1)ನೇ ಉಪಪ್ರಕರಣವೆಂದು ಮರುಸಂಖ್ಯೆ ನೀಡತಕ್ಕದ್ದು ಮತ್ತು ಹಾಗೆ ಮರುಸಂಖ್ಯೆ ನೀಡಲಾದ (1)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2) ನಿಧಿಯ ಲಭ್ಯತೆಗೆ ಒಳಪಟ್ಟು, ಸರ್ಕಾರವು ರಾಜ್ಯ ಹಣಕಾಸು ಆಯೋಗವು ನಿರ್ಧರಿಸಬಹುದಾದಂತೆ ಪಂಚಾಯತ್‌ಗಳಿಗೆ ಅನುದಾನಗಳ ಅಂಥ ಶೇಕಡಾವಾರನ್ನು ಹಂಚಿಕೆ ಮಾಡತಕ್ಕದ್ದು ಅದರಲ್ಲಿ ಶೇಕಡಾ ಇಪ್ಪತ್ತು ಮುಕ್ತ (untied) ಅನುದಾನಗಳಾಗಿರತಕ್ಕದ್ದು.

(3) ವಿಶೇಷ ಘಟಕ ಯೋಜನೆ ಮತ್ತು ಬುಡಕಟ್ಟುಗಳ ಉಪಯೋಜನೆಯೆಡೆಗಿನ ಅನುದಾನಗಳ ಹಂಚಿಕೆಯ ವಿಧಾನವು ಗ್ರಾಮಪಂಚಾಯತ್ ಪ್ರದೇಶದಲ್ಲಿನ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡದ ಜನಗಣತಿಯ ಆಧಾರದ ಮೇಲಿರತಕ್ಕದ್ದು."

**59. 209ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 209ನೇ ಪ್ರಕರಣದಲ್ಲಿ ಕೊನೆಯಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಗುತ್ತಿಗೆ ಅಥವಾ ಬಾಡಿಗೆಯ ಮೂಲಕ ಸ್ವತ್ತುಗಳ ವರ್ಗಾವಣೆಯ ಶೇಕಡಾ ಇಪ್ಪತ್ತೈದರಷ್ಟನ್ನು ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳಿಗೆ ಮೀಸಲಿಡತಕ್ಕದ್ದು."

**60. ಅಧ್ಯಾಯ XVI ರ ತಿದ್ದುಪಡಿ.–** ಮೂಲ ಅಧಿನಿಯಮದ ಅಧ್ಯಾಯ–XVIರ ಶೀರ್ಷಿಕೆಯಲ್ಲಿ "ಪರಿವೀಕ್ಷಣೆ, ಮೇಲ್ವಿಚಾರಣೆ ಇತ್ಯಾದಿ" ಪದಗಳಿಗೆ "ಆಡಳಿತ, ಪರಿವೀಕ್ಷಣೆ, ಮೇಲ್ವಿಚಾರಣೆ ಮತ್ತು ಗ್ರಾಮ ಸ್ವರಾಜ್ ಮತ್ತು ಪಂಚಾಯತ್‌ರಾಜ್‌ದ ಆಯುಕ್ತರ ಕಾರ್ಯಾಲಯದ (ಕಮೀಷನರೇಟಿನ) ಸೃಜನೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**61. 232ಎ ಮತ್ತು 232ಬಿ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 232ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**232ಎ. ಪಂಚಾಯತ್‌ರಾಜ್ ಆಯುಕ್ತರ ಕಾರ್ಯಾಲಯದ ಸ್ಥಾಪನೆ.–** ರಾಜ್ಯದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು ಸುಗಮವಾಗಿ ಕಾರ್ಯನಿರ್ವಹಿಸುವುದಕ್ಕೆ ಅನುಕೂಲ ಮಾಡಿಕೊಡುವ ನಿಟ್ಟಿನಲ್ಲಿ ಪ್ರತ್ಯೇಕವಾಗಿ ಪಂಚಾಯತ್ ರಾಜ್ ಸೇವೆಗಳಿಗೆಂದೇ ಸರ್ಕಾರವು ಆಯುಕ್ತರ ಕಾರ್ಯಾಲಯವನ್ನು ಸ್ಥಾಪಿಸತಕ್ಕದ್ದು. ಅದರ ಅಧಿಕಾರಗಳು, ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಹಾಗೂ ಹುದ್ದೆಗಳ ಪ್ರವರ್ಗಗಳ ಸಂಖ್ಯೆ, ನೇಮಕಾತಿ ವಿಧಾನ, ಕನಿಷ್ಠ ಅರ್ಹತೆ ಇವುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

**232ಬಿ. ಕರ್ನಾಟಕ ಪಂಚಾಯತ್ ಆಡಳಿತಾತ್ಮಕ ಸೇವೆಯ ಸ್ಥಾಪನೆ.–** ಸರ್ಕಾರವು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಅಂಥ ಹುದ್ದೆಗಳ ಪ್ರವರ್ಗವನ್ನು ಒಳಗೊಂಡ ಕರ್ನಾಟಕ ಪಂಚಾಯತ್‌ರಾಜ್ ಆಡಳಿತಾತ್ಮಕ ಸೇವೆಯನ್ನು ರಚಿಸತಕ್ಕದ್ದು, ಅಂಥ ಹುದ್ದೆಗಳ ಸಂಖ್ಯೆ, ವೇತನ ಶ್ರೇಣಿ, ನೇಮಕಾತಿ ವಿಧಾನ ಮತ್ತು ಕನಿಷ್ಠ ವಿದ್ಯಾರ್ಹತೆಯ ನಿಯಮಿಸಬಹುದಾದಂತೆ ಇರತಕ್ಕದ್ದು."

**62. 267ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 267ನೇ ಪ್ರಕರಣದ (8)ನೇ ಉಪಪ್ರಕರಣದಲ್ಲಿ "ಉಭಯ ಸದನಗಳ ಮುಂದೆ" ಎಂಬ ಪದಗಳ ತರುವಾಯ "ಆರು ತಿಂಗಳುಗಳ ಅವಧಿಯ ಒಳಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

**63. 296ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 296ಎ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿನಿಯೋಜಿಸತಕ್ಕದ್ದು, ಎಂದರೆ:–

"**296ಎ ಕುಂದು ಕೊರತೆ ನಿವಾರಣಾ ಪ್ರಾಧಿಕಾರ.–** (1) ರಾಜ್ಯ ಸರ್ಕಾರವು, ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ ಪ್ರತಿಯೊಂದು ಜಿಲ್ಲೆಯಲ್ಲಿ, ನಿವೃತ್ತ ಜಿಲ್ಲಾ ನ್ಯಾಯಾಧೀಶ ಅಥವಾ ವಿಶೇಷ ಡೆಪ್ಯೂಟಿ ಕಮೀಷನರ್ ದರ್ಜೆಗೆ ಕಡಿಮೆಯಿಲ್ಲದ ದರ್ಜೆಯ ಅಧಿಕಾರಿಯನ್ನು ಒಳಗೊಂಡ ಕುಂದು ಕೊರತೆ ನಿವಾರಣಾ ಪ್ರಾಧಿಕಾರಿಯನ್ನಾಗಿ ನೇಮಿಸತಕ್ಕದ್ದು.

(2) ರಾಜ್ಯ ಸರ್ಕಾರವು ಕುಂದುಕೊರತೆ ನಿವಾರಣಾ ಪ್ರಾಧಿಕಾರಿಗೆ ಅವಶ್ಯಕ ಸಿಬ್ಬಂದಿಯನ್ನು ಒದಗಿಸತಕ್ಕದ್ದು.

(3) ಕುಂದು ಕೊರತೆ ನಿವಾರಣಾ ಪ್ರಾಧಿಕಾರದ ಕಛೇರಿಯು ವಾರದ ಎಲ್ಲಾ ಕೆಲಸದ ದಿನಗಳಂದು ಪಂಚಾಯತ್‌ನ ವ್ಯವಹಾರ ವೇಳೆಗಳಲ್ಲಿ ತೆರೆದಿರತಕ್ಕದ್ದು.

(4) ಕುಂದು ಕೊರತೆ ನಿವಾರಣಾ ಪ್ರಾಧಿಕಾರದ ಸಂಬಳ ಮತ್ತು ಇತರ ಭತ್ಯೆಗಳು, ಆತನ ನಿವೃತ್ತಿ ಮುಂಚೆ ಅತನು ಅರ್ಹನಾದುದಕ್ಕೆ ನಿವೃತ್ತಿ ವೇತನವನ್ನು ಕಳೆದು, ಆಗಿರತಕ್ಕದ್ದು.

(5) ಕುಂದು ಕೊರತೆ ನಿವಾರಣಾ ಪ್ರಾಧಿಕಾರವು, ನಿಯಮಿಸಬಹುದಾದ ಅಂಥ ಅವಧಿಯೊಳಗೆ ಬಾಧಿತ ನಾಗರಿಕರಿಗೆ ಕುಂದು ಕೊರತೆ ನಿವಾರಣಾ ಪ್ರಾಧಿಕಾರದ ನಿರ್ಧಾರವನ್ನು ತಿಳಿಸತಕ್ಕದ್ದು.

(6) ಕುಂದು ಕೊರತೆ ನಿವಾರಣಾ ಪ್ರಾಧಿಕಾರವು, ಜಿಲ್ಲಾ ಕುಂದು ಕೊರತೆ ನಿವಾರಣಾ ಪ್ರಾಧಿಕಾರಿಯ ನಿರ್ಧಾರವನ್ನು ತಿಳಿಸುವುದಕ್ಕಾಗಿ ನಿಯಮಿಸಲಾದ ಅವಧಿಯ ಮುಕ್ತಾಯವಾದ ತರುವಾಯ ತಕ್ಷಣವೇ, ದೂರುದಾರರ ವಿವರಗಳು ದೂರಿನ ಸ್ವರೂಪ ಮತ್ತು ಪರಿಹಾರ ನೀಡದಿರುವುದಕ್ಕೆ ಕಾರಣಗಳೊಂದಿಗೆ ಪರಿಹಾರ ನೀಡದ ಪ್ರತಿಯೊಂದು ದೂರನ್ನು,-

(i) ಗ್ರಾಮ ಪಂಚಾಯತಿ ಮತ್ತು ತಾಲೂಕು ಪಂಚಾಯಿತಿಯ ಸಂದರ್ಭದಲ್ಲಿ, ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗೆ; ಮತ್ತು

(ii) ಜಿಲ್ಲಾ ಪಂಚಾಯಿತಿಯ ಸಂದರ್ಭದಲ್ಲಿ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ,

– ಇವರಿಗೆ ಅವಶ್ಯಕ ಕ್ರಮಕ್ಕಾಗಿ ವರದಿ ಮಾಡತಕ್ಕದ್ದು.

(7) ಕುಂದು ಕೊರತೆ ನಿವಾರಣಾ ಪ್ರಾಧಿಕಾರವು, ಯಾವುದೇ ದೂರನ್ನು ನಿರ್ಧರಿಸುವ ಸಮಯದಲ್ಲಿ ಸಂಬಂಧಪಟ್ಟ ಅಧಿಕಾರಿ ಅಥವಾ ಅಧಿಕಾರಿಗಳ ಅಥವಾ ಯಾವುದೇ ಇತರ ವ್ಯಕ್ತಿಯು, ಯಾವುದೇ ಯುಕ್ತ ಕಾರಣವಿಲ್ಲದೆ, ಈ ಅಧಿನಿಯಮದ ಅಡಿಯಲ್ಲಿ ಆತನು ನಿರ್ವಹಿಸಬೇಕಾದ ಆತನ ಕರ್ತವ್ಯಗಳನ್ನು ಬೇಕಾಗಿಯೇ ಕಡೆಗಣಿಸಿರುವನು ಅಥವಾ ನಿರಾಕರಿಸಿರುವನೆಂದು ಅಥವಾ ವಿಫಲನಾಗಿರುವನು ಅಥವಾ ನಿಗದಿತ ಸಮಯದೊಳಗೆ ನೀಡಬೇಕಾದ ಸೇವೆಯನ್ನು ವಿಸ್ತರಿಸುವುದಕ್ಕೆ ದುರ್ಭಾವನೆಯಿಂದ ಅಲ್ಲಗಳೆದಿದ್ದಾನೆಂದು ಅಭಿಪ್ರಾಯಪಟ್ಟಲ್ಲಿ, ಅಂಥ ಅಧಿಕಾರಿಯನ್ನು ಅಥವಾ ವ್ಯಕ್ತಿಯನ್ನು ಕುಂದು ಕೊರತೆ ಪರಿಹಾರವಾಗುವವರೆಗೆ ಪ್ರತಿ ದಿನಕ್ಕೆ ಎರಡು ನೂರ ಐವತ್ತು ರೂಪಾಯಿಗಳ ದಂಡಕ್ಕೆ ಒಳಪಡಿಸತಕ್ಕದ್ದು. ಆದಾಗ್ಯೂ ಅಂಥ ದಂಡದ ಒಟ್ಟು ಮೊತ್ತವು ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ಮೀರತಕ್ಕದ್ದಲ್ಲ. ಕುಂದುಕೊರತೆ ಪ್ರಾಧಿಕಾರವು ದಂಡದ ಸ್ಥಾನದಲ್ಲಿ ಸಂಬಂಧಪಟ್ಟ ಅಧಿಕಾರಿ ಅಥವಾ ವ್ಯಕ್ತಿಯ ವಿರುದ್ಧ ಸೇವಾ ನಿಯಮಗಳ ಅಥವಾ ಆತನಿಗೆ ಅನ್ವಯವಾಗುವ ಸಂಬಂಧಿಸಿದ ಕಾನೂನಿನ ಅಡಿಯಲ್ಲಿ ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳುವಂತೆ ಶಿಫಾರಸು ಮಾಡಬಹುದು:

ಪರಂತು, ಸಂಬಂಧಪಟ್ಟ ಅಧಿಕಾರಿ ಅಥವಾ ವ್ಯಕ್ತಿಗೆ ಆತನ ಮೇಲೆ ಯಾವುದೇ ದಂಡವನ್ನು ವಿಧಿಸುವ ಪೂರ್ವದಲ್ಲಿ ತನ್ನ ಅಹವಾಲನ್ನು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡತಕ್ಕದ್ದು:

ಮತ್ತು ಪರಂತು, ಆತನು ಯುಕ್ತವಾಗಿ ಮತ್ತು ಶ್ರದ್ಧಾಪೂರ್ವಕವಾಗಿ (diligently) ಹಾಗೇ ಮಾಡಿದ್ದಾನೆಂದು ರುಜುವಾತು ಪಡಿಸುವ ಹೊಣೆಯು ನೀಡಬೇಕಾದ ಸೇವೆಯನ್ನು ನೀಡಲು ನಿರಾಕರಣೆ ಮಾಡಿರುವ ಅಧಿಕಾರಿ ಅಥವಾ ವ್ಯಕ್ತಿಯದ್ದಾಗಿರತಕ್ಕದ್ದು.

**ವಿವರಣೆ**: ಈ ಪ್ರಕರಣದ ಉದ್ದೇಶಕ್ಕಾಗಿ:-

(ಎ) **"ಬಾಧಿತ ವ್ಯಕ್ತಿ"** ಎಂದರೆ ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಅಡಿಯಲ್ಲಿ ಆತನು ಅನುಭವಿಸಬೇಕಾದ ಸೇವೆಯನ್ನು ನೀಡುವಲ್ಲಿ ಗ್ರಾಮ ಪಂಚಾಯಿತಿ, ತಾಲೂಕ ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಯಲ್ಲಿ ಯಾವುದನ್ನಾದರೂ ಮಾಡಬೇಕಾದ್ದರಿಂದ ಅಥವಾ ಬಿಟ್ಟು ಬಿಡುವುದರಿಂದ ಬಾಧಿತನಾದ ಒಬ್ಬ ನಾಗರಿಕ ಮತ್ತು ಪಂಚಾಯಿತಿನ ಮೂಲಕ ಸರ್ಕಾರವು ನೀಡುವ ಯಾವುದೇ ಸ್ಕೀಮಿನ ಪ್ರಯೋಜನವನ್ನು ಕೋರುವ ವ್ಯಕ್ತಿಯನ್ನು ಒಳಗೊಳ್ಳುತ್ತದೆ ;

(ಬಿ) **"ಕುಂದು ಕೊರತೆ"** ಎಂದರೆ :-

(i) ನೀರು ಸರಬರಾಜು ;

(ii) ಆರೋಗ್ಯ ನಿರ್ವಹಣೆ ;

(iii) ರಸ್ತೆ ನಿರ್ವಹಣೆ ;

(iv) ಬೀದಿ ದೀಪಗಳ ನಿರ್ವಹಣೆ ;

(v) ಯಾವುದೇ ಸ್ಕೀಮ್ ಅಥವಾ ಯೋಜನೆಯ ಫಲಾನುಭವಿಗಳನ್ನು ಗುರುತಿಸುವುದು;

(vi) ಯಾವುದೇ ಸ್ಕೀಮಿನ ಅಥವಾ ಯೋಜನೆಯ ಪ್ರಯೋಜನದ ಹಂಚಿಕೆ;

(vii) ನೈರ್ಮಲೀಕರಣ ನಿರ್ವಹಣೆ ;

(viii) ಯಾವುದೇ ದಸ್ತಾವೇಜುಗಳು ಅಥವಾ ಪ್ರಮಾಣಪತ್ರವನ್ನು ಮಂಜೂರು ಮಾಡುವುದು ಅಥವಾ ಹೊರಡಿಸುವುದು

(ix) ನಿಯಮಿಸಬಹುದಾದ ಯಾವುದೇ ಇತರ ವಿಷಯ,-

– ಇವುಗಳ ಸಂಬಂಧದಲ್ಲಿ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿ ತೆಗೆದುಕೊಳ್ಳುವ ಕ್ರಿಯೆಯನ್ನು ಮಾಡುವುದರಿಂದ ಅಥವಾ ಬಿಟ್ಟುಬಿಡುವುದರ ಕುರಿತು ಬಾಧಿತ ನಾಗರಿಕನು ನೀಡುವ ಯಾವುದೇ ದೂರನ್ನು ಇದು ಒಳಗೊಳ್ಳುತ್ತದೆ.

**64. 296ಬಿ. ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 296ಬಿ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

**"296ಬಿ. ಕುಂದು ಕೊರತೆ ನಿವಾರಣಾ ಪ್ರಾಧಿಕಾರದ ಅಧಿಕಾರಗಳು ಮತ್ತು ಕರ್ತವ್ಯಗಳು.– (1)** ಕುಂದು ಕೊರತೆ ನಿವಾರಣಾ ಪ್ರಾಧಿಕಾರವು ;-

(ಎ) ಬಾಧಿತ ವ್ಯಕ್ತಿಯ ಕುಂದು ಕೊರತೆಯನ್ನು ಪರಿಹರಿಸುವುದಕ್ಕೆ ಆತನು ಅವಶ್ಯವೆಂದು ಭಾವಿಸುವ ಯಾವುದೇ ದಸ್ತಾವೇಜನ್ನು ಕೇಳಬಹುದು ಮತ್ತು ಪರಿಶೀಲಿಸಬಹುದು.

(ಬಿ) ಕುಂದು ಕೊರತೆ ನಿವಾರಣಾ ಪ್ರಾಧಿಕಾರವು, ಈ ಅಧಿನಿಯಮದ ಅಡಿಯಲ್ಲಿ ಪ್ರಕಾರ್ಯಗಳನ್ನು ನಿರ್ವಹಿಸುವ ಉದ್ದೇಶಗಳಾಗಿ, ಈ ಮುಂದಿನ ವಿಷಯಗಳ ಸಂಬಂಧದಲ್ಲಿ ಸಿವಿಲ್ ಪ್ರಕ್ರಿಯಾ ಸಂಹಿತೆ 1908ರ, ಅಡಿಯಲ್ಲಿ ಸಿವಿಲ್ ನ್ಯಾಯಾಲಯದಲ್ಲಿ ನಿಹಿತವಾದಂಥದೇ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:-

(i) ಯಾವುದೇ ವ್ಯಕ್ತಿಯ ಹಾಜರಾತಿಯನ್ನು ಸಮನು ಮಾಡುವುದು ಮತ್ತು ಒತ್ತಾಯಪಡಿಸುವುದು ಹಾಗೂ ಪ್ರಮಾಣದ ಮೇಲೆ ಆತನನ್ನು ಪರೀಕ್ಷಿಸುವುದು;

(ii) ಸಾಕ್ಷ್ಯವಾಗಿ ನೀಡುವ ಯಾವುದೇ ದಸ್ತಾವೇಜು ಅಥವಾ ಇತರ ಭೌತಿಕ ವಸ್ತುವನ್ನು ಹುಡುಕುವುದು ಮತ್ತು ಒದಗಿಸುವುದು;

(iii) ಅಫಿಡವಿಟ್ಟುಗಳ ಮೇಲೆ ಸಾಕ್ಷ್ಯವನ್ನು ಸ್ವೀಕರಿಸುವುದು;

(iv) ಯಾವುದೇ ಸಾರ್ವಜನಿಕ ದಾಖಲೆಗಳನ್ನು ಅಗತ್ಯಪಡಿಸುವುದು;

(v) ಸಾಕ್ಷಿಗಳ ಪರೀಕ್ಷೆಗಾಗಿ ಕಮೀಷನ್ ಗಳನ್ನು ಹೊರಡಿಸುವುದು;

(vi) ತನ್ನ ನಿರ್ಧಾರಗಳು, ನಿರ್ದೇಶನಗಳು ಮತ್ತು ಆದೇಶಗಳನ್ನು ಪುನರಾವಲೋಕಿಸುವುದು;

(vii) ನಿಯಮಿಸಬಹುದಾದ ಅಂಥ ಇತರ ವಿಷಯ.

(2) ಕುಂದು ಕೊರತೆ ನಿವಾರಣಾ ಪ್ರಾಧಿಕಾರವು ಅರೆ ನ್ಯಾಯಿಕ ಪ್ರಾಧಿಕಾರವಾಗಿದ್ದು ತನ್ನ ಮುಂದಿನ ವಿಷಯಗಳನ್ನು ಕ್ಷಿಪ್ರವಾಗಿ (summarily) ವಿಲೇ ಮಾಡತಕ್ಕದ್ದು.

(3) ಒಂದು ಕಛೇರಿ ಅಥವಾ ಅಧಿಕಾರಿ ಅಥವಾ ಸಿಬ್ಬಂದಿಯ ನ್ಯೂನತೆ ನಿರ್ಲಕ್ಷ್ಯ ಅಥವಾ ದುಷ್ಕೃತ್ಯದ ಪರಿಣಾಮವಾಗಿ ಆಗಿರುವ ಕುಂದು ಕೊರತೆಯನ್ನು ಅಥವಾ ನಿರ್ದಿಷ್ಟ ಆಕ್ರಮಗಳು ಅಥವಾ ಫಲಾನುಭವಕ್ಕೆ ಪರಿಣಾಮ ಉಂಟು ಮಾಡುವ ಭೌತಿಕ ಪ್ರಯೋಜನ ಅಥವಾ ಬೇಧ-ಭಾವವನ್ನು ಸೂಚಿಸುವ ನಿರ್ಧಿಷ್ಟ ಪ್ರಕರಣವನ್ನು ಹೊರತುಪಡಿಸಿ ಬಾಧಿತ ನಾಗರಿಕನ ಯಾವುದೇ ದೂರನ್ನು ಕುಂದು ಕೊರತೆ ನಿವಾರಣಾ ಪ್ರಾಧಿಕಾರವು ಪುರಸ್ಕರಿಸತಕ್ಕದ್ದಲ್ಲ.

(4) ಕುಂದು ಕೊರತೆ ನಿವಾರಣಾ ಪ್ರಾಧಿಕಾರವು ಈ ಮುಂದಿನದನ್ನು ಖಚಿತಪಡಿಸಿಕೊಳ್ಳತಕ್ಕದ್ದು, ಎಂದರೆ :-

(ಎ) ದೂರನ್ನು ಸ್ವೀಕರಿಸಿದ ದಿನಾಂಕದಿಂದ ತೊಂಬತ್ತು ದಿನಗಳು ಮೀರದ ಸಮಯದ ಚೌಕಟ್ಟಿನಲ್ಲಿ ತೊಂದರೆಯನ್ನು ಪರಿಹರಿಸಲಾಗಿದೆ ; ಅಥವಾ

(ಬಿ) ತೊಂದರೆಯು ಆಗಿರುವ ಕಾರಣವನ್ನು ಗುರುತಿಸುವುದು ಮತ್ತು ತಪ್ಪಿತಸ್ಥ ಅಧಿಕಾರಿ ಅಥವಾ ವ್ಯಕ್ತಿಗಳಿಗೆ ಜವಾಬ್ದಾರಿಯನ್ನು ಹೊರಿಸುವುದು ಮತ್ತು (ಎ) ಖಂಡದಲ್ಲಿ ನಿರ್ದಿಷ್ಟಪಡಿಸಿದ ಅವಧಿಯ ತರುವಾಯ ಒಂದು ತಿಂಗಳೊಳಗೆ ಕುಂದುಕೊರತೆಯನ್ನು ಸಮಾಧಾನಕರವಾಗಿ ಪರಿಹರಿಸಲಾಗಿದೆ ; ಅಥವಾ

(ಸಿ) ಅಧಿಕಾರಿ ಅಥವಾ ವ್ಯಕ್ತಿಯ ಅಸಮರ್ಥತೆ, ನಿರ್ಲಕ್ಷ್ಯ ಅಥವಾ ದುಷ್ಕೃತ್ಯದ ಪರಿಣಾಮವಾಗಿ ತೊಂದರೆಯಾಗಿದ್ದಲ್ಲಿ ಕ್ರಮವನ್ನು ನಡತೆ ನಿಯಮಗಳು ಮತ್ತು ಇಲಾಖಾ ಪ್ರಕ್ರಿಯೆಗಳ ಅನುಸಾರವಾಗಿ ನಡೆಸಲಾಗಿದೆ ; ಅಥವಾ

(ಡಿ) ಸರಕುಗಳ ಮತ್ತು ಸೇವೆಗಳನ್ನು ನೀಡಲು ಜವಾಬ್ದಾರನಾದ ವ್ಯಕ್ತಿಯು ಬೇಕಾಗಿಯೇ ಸರಕು ಅಥವಾ ಸೇವೆಯನ್ನು ಒದಗಿಸಲು ನಿರ್ಲಕ್ಷಿಸಿರುವ ಅಥವಾ ಭ್ರಷ್ಟಾಚಾರ ತಡೆಗಟ್ಟುವ ಅಧಿನಿಯಮ 1988 ರ ಅಡಿಯಲ್ಲಿ ಪ್ರಕರಣದ ಮೇಲ್ನೋಟದಲ್ಲೇ ಆಧಾರಗಳು ಇದ್ದಾಗ ಆ ಮಟ್ಟಿಗೆ ವಿಧಿಸಬೇಕಾದ ದಂಡದ ಶಿಫಾರಸ್ಸಿನೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಸಂದರ್ಭಾನುಸಾರವಾಗಿ ಸರ್ಕಾರದ ಕಾರ್ಯದರ್ಶಿಗೆ ಆತನು ಅವಲೋಕನೆಯನ್ನು ಮಾಡುವುದು.

(5) ಕುಂದು ಕೊರತೆ ನಿವಾರಣಾ ಪ್ರಾಧಿಕಾರವು ತನ್ನ ಕರ್ತವ್ಯಗಳ ಕ್ರಮಬದ್ಧ ನಿರ್ವಹಣೆಗಾಗಿ ಅಗತ್ಯವಾದ ಯಾವುದೇ ಇತರ ಅಧಿಕಾರಿಯ ನೆರವನ್ನು ಕೋರಬಹುದು ಅಥವಾ ಬಾಧಿತ ನಾಗರಿಕನು ಮಾಡಿದ ದೂರಿನ ಪರಿಹಾರಕ್ಕೆ ಕ್ರಮ ಕೈಗೊಳ್ಳುವಂತೆ ಯಾವುದೇ ಇತರ ಅಧಿಕಾರಿಗೆ ನಿರ್ದೇಶಿಸಬಹುದು.

(6) (5)ನೇ ಉಪಪ್ರಕರಣದ ಅಡಿಯಲ್ಲಿ ನೆರವನ್ನು ಕೋರಲಾದ ಯಾವೊಬ್ಬ ಅಧಿಕಾರಿಯು ಕುಂದುಕೊರತೆ ನಿವಾರಣಾ ಪ್ರಾಧಿಕಾರಕ್ಕೆ ಎಲ್ಲಾ ನೆರವನ್ನು ನೀಡತಕ್ಕದ್ದು."

**65. 296ಸಿ. ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 296ಸಿ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ :-

**"296ಸಿ. ಅಪೀಲು.-** (1) ಕುಂದು ಕೊರತೆ ನಿವಾರಣಾ ಪ್ರಾಧಿಕಾರದ ನಿರ್ಧಾರದಿಂದ ಬಾಧಿತನಾದ ಅಥವಾ ಆತನು ದಾಖಲ್ಮಾಡಿದ ದೂರಿನ ಸಂಬಂಧದಲ್ಲಿ ತೆಗೆದುಕೊಂಡ ಕ್ರಮದ ವರದಿಯನ್ನು ಸ್ವೀಕರಿಸಿದ ಯಾವೊಬ್ಬ ವ್ಯಕ್ತಿಯು, ಅಂಥ ತೀರ್ಮಾನದ ಸ್ವೀಕೃತಿಯ ಮುಕ್ತಾಯದಿಂದ ಮೂವತ್ತು ದಿನಗಳ ಒಳಗಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಸಂದರ್ಭಕ್ಕನುಸಾರವಾಗಿ ಸರ್ಕಾರದ ಕಾರ್ಯದರ್ಶಿಗೆ ಅಪೀಲನ್ನು ಸಲ್ಲಿಸಬಹುದು ಮತ್ತು ಅಂಥ ಅಪೀಲು ಪ್ರಾಧಿಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು :

ಪರಂತು ಅಪೀಲು ಪ್ರಾಧಿಕಾರವು, ಒಂದು ವೇಳೆ ದೂರುದಾರನು ಸಮಯದೊಳಗೆ ಅಪೀಲನ್ನು ದಾಖಲು ಮಾಡದೇ ಇರಲು ಸಾಕಷ್ಟು ಕಾರಣಗಳು ದೂರುದಾರರನ್ನು ನಿರ್ಬಂಧಿಸಿದೆ ಎಂದು ಮನಗಂಡರೆ, ಮೂವತ್ತು ದಿನಗಳ ತರುವಾಯವೂ ಅಪೀಲನ್ನು ಸ್ವೀಕರಿಸಬಹುದು

(2) ಪ್ರತಿಯೊಂದು ಅಪೀಲನ್ನು ಅಂಥ ಅಪೀಲನ್ನು ಸ್ವೀಕರಿಸಿದ ದಿನಾಂಕದಿಂದ ತೊಂಬತ್ತು ದಿನಗಳೊಳಗೆ ವಿಲೆ ಮಾಡತಕ್ಕದ್ದು.

(3) ಅಪೀಲು ಪ್ರಾಧಿಕಾರವು, ತಾನು ತೆಗೆದುಕೊಂಡ ತೀರ್ಮಾನಗಳ ದಿನಾಂಕದಿಂದ ಹದಿನೈದು ಕೆಲಸದ ದಿನಗಳ ಅವಧಿಯೊಳಗೆ ಸಂಬಂಧಪಟ್ಟ ಪಕ್ಷಕಾರರಿಗೆ ತೀರ್ಮಾನಗಳ ಪ್ರತಿಯನ್ನು ತಲುಪಿಸುವ ವ್ಯವಸ್ಥೆ ಮಾಡತಕ್ಕದ್ದು"

**66. 296ಡಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 296ಡಿ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"296ಡಿ. ಕುಂದು ಕೊರತೆ ನಿವಾರಣಾ ಪ್ರಾಧಿಕಾರದ ಪದಾವಧಿ.–** ಕುಂದು ಕೊರತೆ ನಿವಾರಣಾ ಪ್ರಾಧಿಕಾರಿಯು ಆತನು ಪದವನ್ನು ವಹಿಸಿಕೊಂಡ ದಿನಾಂಕದಿಂದ ಐದು ವರ್ಷಗಳ ಅವಧಿಗಾಗಿ ಅಥವಾ ಆತನಿಗೆ ಅರವತ್ತೈದು ವರ್ಷಗಳಾಗುವವರೆಗೂ ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ಪದವನ್ನು ಹೊಂದತಕ್ಕದ್ದು ಮತ್ತು ಮರು ನೇಮಕಕ್ಕಾಗಿ ಅರ್ಹನಾಗತಕ್ಕದ್ದಲ್ಲ"

**67. 296ಇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 296ಇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"296ಇ. ರಾಜೀನಾಮೆ ಮತ್ತು ತೆಗೆದುಹಾಕುವುದು.– (1)** ಕುಂದು ಕೊರತೆ ನಿವಾರಣಾ ಪ್ರಾಧಿಕಾರಿಯು ರಾಜ್ಯ ಸರ್ಕಾರಕ್ಕೆ ಸ್ವಹಸ್ತದಿಂದ ಲಿಖಿತದಲ್ಲಿನ ನೋಟೀಸನ್ನು ಸಲ್ಲಿಸುವ ಮೂಲಕ ತನ್ನ ಪದಕ್ಕೆ ರಾಜೀನಾಮೆ ನೀಡಬಹುದು.

(2) (1)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ, ಸರ್ಕಾರವು ಆದೇಶದ ಮೂಲಕ, ಕುಂದು ಕೊರತೆ ನಿವಾರಣಾ ಪ್ರಾಧಿಕಾರದ ಪದದಿಂದ ಕುಂದು ಕೊರತೆ ನಿವಾರಣಾ ಪ್ರಾಧಿಕಾರಿಯನ್ನು –

(ಎ) ಆತನು ಅವಿಮುಕ್ತ ದಿವಾಳಿಯಾಗಿದ್ದಲ್ಲಿ; ಅಥವಾ

(ಬಿ) ನೈತಿಕ ಅಧಃಪತನವನ್ನು ಒಳಗೊಂಡಿದೆ ಎಂದು ಸರ್ಕಾರವು ಅಭಿಪ್ರಾಯಪಡುವ ಅಪರಾಧದಲ್ಲಿ ಅಪರಾಧ ನಿರ್ಣೀತನಾಗಿದ್ದಲ್ಲಿ; ಅಥವಾ

(ಸಿ) ಆತನು ತನ್ನ ಪದಾವಧಿಯಲ್ಲಿ ಆತನ ಪದದ ಕರ್ತವ್ಯಗಳ ಹೊರತಾಗಿ ಯಾವುದೇ ಸಂಬಳ ಪಡೆಯುವ ಉದ್ಯೋಗದಲ್ಲಿ ತೊಡಗಿರುವನೆಂದು; ಅಥವಾ

(ಡಿ) ಮಾನಸಿಕ ಅಥವಾ ದೈಹಿಕ ಅಸಮರ್ಥತೆಯ ಕಾರಣವಾಗಿ ಪದದಲ್ಲಿ ಮುಂದುವರೆಯಲು ಅರ್ಹನಲ್ಲವೆಂದು ಸರ್ಕಾರವು ಅಭಿಪ್ರಾಯಪಟ್ಟಲ್ಲಿ; ಅಥವಾ

(ಇ) ಕುಂದು ಕೊರತೆ ನಿವಾರಣಾ ಪ್ರಾಧಿಕಾರಿಯಾಗಿ ಆತನ ಪ್ರಕಾರ್ಯಗಳಿಗೆ ಪೂರ್ವಾಗ್ರಹವಾಗಿ ಪರಿಣಾಮವುಂಟು ಮಾಡುವ ಅಂಥ ಹಣಕಾಸು ಅಥವಾ ಇತರೆ ಹಿತಾಸಕ್ತಿಯನ್ನು ಹೊಂದಿದ್ದಲ್ಲಿ ಆತನನ್ನು ತೆಗೆದು ಹಾಕಬಹುದು.

**68. 296ಎಫ್ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 296ಎಫ್ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿನಿಯೋಜಿಸತಕ್ಕದ್ದು, ಎಂದರೆ:–

**"296ಎಫ್. ಕುಂದು ಕೊರತೆ ನಿವಾರಣಾ ಪ್ರಾಧಿಕಾರದ ಪ್ರಕ್ರಿಯೆ ಮತ್ತು ವಿಧಾನಗಳು:–** (1) ದೂರನ್ನು ದಾಖಲ್ಮಾಡುವ ಪ್ರಕ್ರಿಯೆ ಮತ್ತು ವಿಧಾನವು ಮತ್ತು ಅಂಥ ದೂರಿನ ಜೊತೆ ಇರಬೇಕಾದ ಫೀಜುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

(2) ಕುಂದು ಕೊರತೆ ನಿವಾರಣಾ ಪ್ರಾಧಿಕಾರದ ಮುಂದೆ ವ್ಯವಹರಣೆಗಳನ್ನು ನಡೆಸುವ ವಿಧಾನ ಮತ್ತು ಪ್ರಕ್ರಿಯೆಯು ನಿಯಮಿಸಬಹುದಾದಂತೆ ಇರತಕ್ಕದ್ದು.

**296 ಜಿ. ತನಿಖೆಗೆ ಒಳಪಡದ ವಿಷಯಗಳು.–** ಕುಂದು ಕೊರತೆ ನಿವಾರಣಾ ಪ್ರಾಧಿಕಾರವು:–

(i) ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ (1985ರ ಕರ್ನಾಟಕ ಅಧಿನಿಯಮ 4) ಉಪಬಂಧಗಳ ಅಡಿಯಲ್ಲಿ ಲೋಕಾಯುಕ್ತ ಅಥವಾ ಉಪ ಲೋಕಾಯುಕ್ತರು ತನಿಖೆ ನಡೆಸುತ್ತಿರುವ; ಅಥವಾ

(ii) ಕೇಂದ್ರ ಅಧಿನಿಯಮ ಅಥವಾ ರಾಜ್ಯ ಅಧಿನಿಯಮಗಳ ಯಾವುದೇ ಉಪಬಂಧಗಳ ಅಡಿಯಲ್ಲಿ ಸಕ್ಷಮ ಪ್ರಾಧಿಕಾರವು ತನಿಖೆ ನಡೆಸುತ್ತಿರುವ,

– ವಿಷಯಗಳಲ್ಲಿ ತನಿಖೆ ನಡೆಸತಕ್ಕದ್ದಲ್ಲ.

**296ಎಚ್. ಬಾಕಿ ಪ್ರಕರಣಗಳ ವರ್ಗಾವಣೆ.–** ಕರ್ನಾಟಕ ಪಂಚಾಯತ್ ರಾಜ್ (ಎರಡನೇ ತಿದ್ದುಪಡಿ) ಅಧಿನಿಯಮ, 2015ರ ಪ್ರಾರಂಭದ ದಿನಾಂಕದಂದು ಪಂಚಾಯತ್ ಓಂಬುಡ್ಸಮನ್ ಮುಂದೆ ಬಾಕಿಯಿರುವ ಎಲ್ಲಾ ಪ್ರಕರಣಗಳು ಸಂಬಂಧಪಟ್ಟ ಕುಂದುಕೊರತೆ ನಿವಾರಣಾ ಪ್ರಾಧಿಕಾರಕ್ಕೆ ವರ್ಗಾವಣೆಯಾಗತಕ್ಕದ್ದು ಮತ್ತು ಅಂಥ ಪ್ರಾಧಿಕಾರದ ಮುಂದೆ ಪ್ರಕರಣಗಳು ದಾಖಲಾಗಿದೆ ಎಂಬಂತೆ ಕುಂದು ಕೊರತೆ ನಿವಾರಣಾ ಪ್ರಾಧಿಕಾರವು ವಿಲೇ ಮಾಡತಕ್ಕದ್ದು.

**296ಐ. ಕೈಗೊಂಡ ಕ್ರಮದ ವರದಿ.– (1)** ಪ್ರತಿಯೊಂದು ಕುಂದು ಕೊರತೆ ನಿವಾರಣಾ ಪ್ರಾಧಿಕಾರವು ತನಗೆ ಮಾಡಲಾದ ದೂರುಗಳ ಅಥವಾ ಅದರಲ್ಲಿ ನಿಯಮಿಸಲಾದ ಅಪೀಲಿನ ಸಂಬಂಧದಲ್ಲಿ ಅನುಸರಿಸಲಾದ ಕ್ರಮದ ವರದಿಯನ್ನು ನಿಯಮಿಸಬಹುದಾದ ಅಂಥ ಅವಧಿಯೊಳಗೆ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2) ಪ್ರತಿಯೊಂದು ಕುಂದು ಕೊರತೆ ನಿವಾರಣಾ ಪ್ರಾಧಿಕಾರವು ತನಗೆ ಮಾಡಲಾದ ದೂರುಗಳ ಅಥವಾ ದಾಖಲ್ಮಾಡಿದ ಅಪೀಲಿನ ಮತ್ತು ಅಂಥ ದೂರುಗಳ ಮತ್ತು ಅಪೀಲುಗಳ ಮೇಲೆ ದಾಖಲಾದ ತೀರ್ಮಾನಗಳ ದಾಖಲೆಯನ್ನು ನಿರ್ವಹಿಸತಕ್ಕದ್ದು.

(3) ಪ್ರತಿಯೊಂದು ಕುಂದು ಕೊರತೆ ನಿವಾರಣಾ ಪ್ರಾಧಿಕಾರವು ತನ್ನ ಜಾಲತಾಣದಲ್ಲಿ ಪ್ರತಿ ತಿಂಗಳ 15ನೇ ದಿನಗೊಳಗಾಗಿ ಅಥವಾ ನಿಯಮಿಸಬಹುದಾದ ಅಂಥ ಅಂತರಗಳಲ್ಲಿ, ಅದರಲ್ಲಿ ಹೇಳಲಾದ ವರದಿಯಲ್ಲಿ ;–

(ಎ) ಸ್ವೀಕರಿಸಲಾದ ದೂರುಗಳ ಸಂಖ್ಯೆಯನ್ನು
(ಬಿ) ಬಾಕಿ ಇರುವ ದೂರುಗಳ ಸಂಖ್ಯೆಯನ್ನು
(ಸಿ) ವಿಲೆಯಾದ ದೂರುಗಳ ಸಂಖ್ಯೆಯನ್ನು
(ಡಿ) ನಿಯಮಿಸಬಹುದಾದ ಅಂಥ ಇತರ ವಿವರಗಳನ್ನು,
– ಪ್ರಕಟಿಸತಕ್ಕದ್ದು."

**69. 298ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 298ನೇ ಪ್ರಕರಣದಲ್ಲಿ,

(i) ಉಪಪ್ರಕರಣ (1)ರಲ್ಲಿ ಇರುವ "ಐದು ನೂರು ರೂಪಾಯಿಗಳವರೆಗೆ" ಎಂಬ ಪದಗಳಿಗೆ ಬದಲಾಗಿ "ಐದು ಸಾವಿರ ರೂಪಾಯಿಗಳವರೆಗೆ" ಎಂಬ ಪದಗಳನ್ನು ಮತ್ತು "ಐದು ರೂಪಾಯಿಗಳವರೆಗೆ" ಎಂಬ ಪದಗಳಿಗೆ ಬದಲಾಗಿ "ಐವತ್ತು ರೂಪಾಯಿಗಳವರೆಗೆ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು;

(ii) ಉಪ–ಪ್ರಕರಣ (2)ರಲ್ಲಿ ಇರುವ 'ಐದು ರೂಪಾಯಿಗಳಿಗೆ' ಎಂಬ ಪದಗಳಿಗೆ 'ಐವತ್ತು ರೂಪಾಯಿಗಳಿಗೆ' ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು;

(iii) ಉಪಪ್ರಕರಣ (3) ರ (ಎ) ಖಂಡದಲ್ಲಿ ಇರುವ 'ಐದು ನೂರು ರೂಪಾಯಿಗಳನ್ನು ಮೀರದ' ಎಂಬ ಪದಗಳಿಗೆ 'ಎರಡು ಸಾವಿರ ರೂಪಾಯಿಗಳನ್ನು ಮೀರದ' ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**70. 308ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 308ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ "ಚುನಾವಣೆಗಳನ್ನು ನಡೆಸುವುದು" ಎಂಬ ಪದಗಳ ತರುವಾಯ "ಮತ್ತು ಅಂತಹ ಚುನಾವಣೆಗಳಿಗೆ ಸಂಬಂಧಪಟ್ಟಂತೆ ಪ್ರಾದೇಶಿಕ ಚುನಾವಣಾ ಕ್ಷೇತ್ರಗಳ ಸೀಮಾ ನಿರ್ಣಯದ ಮತ್ತು ನೀತಿಸಂಹಿತೆಯನ್ನು ಜಾರಿಗೆ ತರುವುದು" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (2)ನೇ ಉಪಪ್ರಕರಣದ ತರುವಾಯ ಈ ಮುಂದಿನಂತೆ ಸೇರಿಸತಕ್ಕದ್ದು. ಎಂದರೆ:–

"(2ಎ) ಆಯುಕ್ತರು, ತಮ್ಮ ಹುದ್ದೆಗೆ ಸ್ವಹಸ್ತಾಕ್ಷರದಲ್ಲಿ ಬರೆದ ರಾಜೀನಾಮೆಯನ್ನು ರಾಜ್ಯಪಾಲರಿಗೆ ಸಲ್ಲಿಸುವ ಮೂಲಕ ತಮ್ಮ ಹುದ್ದೆಗೆ ರಾಜೀನಾಮೆಯನ್ನು ನೀಡಬಹುದು, ಆದರೆ ರಾಜ್ಯಪಾಲರು ರಾಜೀನಾಮೆಯನ್ನು ಅಂಗೀಕರಿಸುವವರೆಗೆ ಆಯುಕ್ತರು ತಮ್ಮ ಹುದ್ದೆಯಲ್ಲಿ ಮುಂದುವರೆಯತಕ್ಕದ್ದು;

(2ಬಿ) (5)ನೇ ಉಪಪ್ರಕರಣದ ಅಡಿಯಲ್ಲಿ ಆಯುಕ್ತರು ರಾಜೀನಾಮೆ ಸಲ್ಲಿಸಿದ ಅಥವಾ ಇತರ ಬೇರಾವುದೇ ಕಾರಣಕ್ಕೆ ತೆರವಾದ ತಾತ್ಕಾಲಿಕ ಹುದ್ದೆಯನ್ನು ಹೊಸದಾಗಿ ನೇಮಕ ಮಾಡುವ ಮೂಲಕ ತುಂಬಬಹುದು:

ಪರಂತು, ಅಂಥ ನೇಮಕವನ್ನು ಆದಷ್ಟು ಬೇಗನೆ ಅಂದರೆ ಆ ಹುದ್ದೆಯು ತೆರವಾದ ದಿನಾಂಕದಿಂದ ಒಂದು ತಿಂಗಳ ಒಳಗೆ ಮಾಡತಕ್ಕದ್ದು.

(2ಸಿ) ಸರ್ಕಾರವು ರಾಜ್ಯ ಚುನಾವಣಾ ಆಯುಕ್ತರ ಹಣಕಾಸು ಅಧಿಕಾರಗಳನ್ನು ನಿರ್ದಿಷ್ಟಪಡಿಸತಕ್ಕದ್ದು ಮತ್ತು ಚುನಾವಣೆಗಳನ್ನು ನಡೆಸುವುದಕ್ಕೆ ಅಗತ್ಯವಿರುವ ಹಣಕಾಸನ್ನು ಸುಗಮವಾಗಿ ಪಡೆಯುವುದಕ್ಕೆ ಅವಕಾಶ ಇರುವುದನ್ನು ಮತ್ತು ಲೆಕ್ಕದ ವಿವಿಧ ಶೀರ್ಷಿಕೆಗಳ ನಡುವೆ ನಿಧಿಗಳನ್ನು ವರ್ಗಾಯಿಸುವುದಕ್ಕೆ ಸಹ ಮುಕ್ತ ಅವಕಾಶ ಇರುವುದನ್ನು ಸುನಿಶ್ಚಿತಪಡಿಸಿಕೊಂಡು ಸಿಬ್ಬಂದಿ ವರ್ಗದವರಿಗೆ ಮತ್ತು ಚುನಾವಣೆಗೆ ಸಂಬಂಧಿಸಿದಂತೆ ತಗಲುವ ಖರ್ಚುವೆಚ್ಚಗಳನ್ನು ನಿರ್ವಹಿಸುವುದಕ್ಕೆ ಮತ್ತು ಪ್ರಕಾರ್ಯಗಳಿಗೆ ಮತ್ತು ಹೊಣೆಗಾರಿಕೆಗಳಿಗೆ ಅನುಗುಣವಾಗಿ ನಿಧಿಗಳನ್ನು ಹಂಚಿಕೆ ಮಾಡತಕ್ಕದ್ದು.

(2ಡಿ) ರಾಜ್ಯ ಚುನಾವಣಾ ಆಯೋಗವು ತನ್ನದೇ ಆದ ಕಾರ್ಯ ವಿಧಾನವನ್ನು ನಿರ್ಧರಿಸತಕ್ಕದ್ದು."

(iii) (3)ನೇ ಉಪಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ರಾಜ್ಯ ಚುನಾವಣಾ ಆಯುಕ್ತರು ಪಂಚಾಯತ್‌ಗಳ ಚುನಾವಣೆಗಳನ್ನು ನಡೆಸುವುದಕ್ಕಾಗಿ ರಾಜ್ಯ ಸಾರ್ವಜನಿಕ ವಲಯಗಳ ಉದ್ದಿಮೆಗಳ ಉದ್ಯೋಗಿಗಳನ್ನು ಸಹ ನಿಯೋಜಿಸಿಕೊಳ್ಳಬಹುದು ಮತ್ತು ಸ್ಥಳೀಯ ಪೋಲೀಸರು ಸೇರಿದಂತೆ ಸಾರ್ವಜನಿಕ ನೌಕರರ ಯಾವುದೇ ವರ್ಗವನ್ನು ಪಂಚಾಯತ್‌ಗಳಿಗೆ ಸಂಬಂಧಿಸಿದ ಚುನಾವಣಾ ಕರ್ತವ್ಯಗಳಲ್ಲಿ ನಿಯೋಜಿಸಿಕೊಳ್ಳುವುದನ್ನು ಬಿಟ್ಟುಬಿಡಬಹುದು."

**71. 308ಎ ಪ್ರಕರಣದ ತಿದ್ದುಪಡಿ.–**ಮೂಲ ಅಧಿನಿಯಮದ 308ಎ ಪ್ರಕರಣಕ್ಕೆ ಈ ಮಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ.–

**"308ಎ. ಕೆಲವು ಪ್ರಾಧಿಕಾರಗಳ ಸಿಬ್ಬಂದಿಯನ್ನು ಚುನಾವಣಾ ಕೆಲಸಕ್ಕೆ ಲಭ್ಯವಾಗುವಂತೆ ಮಾಡುವುದು.–** (1) (2)ನೇ ಉಪಪ್ರಕರಣ ನಿರ್ದಿಷ್ಟಪಡಿಸಿರುವ ಪ್ರಾಧಿಕಾರಗಳು ಚುನಾವಣೆಗೆ ಸಂಬಂಧಿಸಿದಂತೆ ಯಾವುದೇ ಕರ್ತವ್ಯಗಳನ್ನು ನಿರ್ವಹಿಸುವುದಕ್ಕೆ ಅಗತ್ಯವಾಗಬಹುದಾದಷ್ಟು ಸಿಬ್ಬಂದಿಯನ್ನು ಯಾರೇ ರಿಟರ್ನಿಂಗ್ ಆಫೀಸರ್‌ಗೆ ಲಭ್ಯವಾಗುವಂತೆ ಮಾಡಬೇಕೆಂದು ರಾಜ್ಯ ಚುನಾವಣಾ ಆಯುಕ್ತರು ಕೋರಿದ ಸಂದರ್ಭದಲ್ಲಿ, ಆ ಸಿಬ್ಬಂದಿ ವರ್ಗದವರನ್ನು ಆ ಪ್ರಾಧಿಕಾರಗಳು ಒದಗಿಸತಕ್ಕದ್ದು.

(2) (1)ನೇ ಉಪಪ್ರಕರಣದ ಉದ್ದೇಶಕ್ಕಾಗಿ ಈ ಮುಂದಿನವುಗಳು ಪ್ರಾಧಿಕಾರಗಳಾಗಿ ಇರತಕ್ಕದ್ದು, ಎಂದರೆ:–

(i) ಪ್ರತಿಯೊಂದು ಸ್ಥಳೀಯ ಪ್ರಾಧಿಕಾರ;

(ii) ಕಾನೂನಿನ ಅಡಿಯಲ್ಲಿ ಸ್ಥಾಪಿತವಾಗಿರುವ ಪ್ರತಿಯೊಂದು ವಿಶ್ವವಿದ್ಯಾನಿಲಯ;

(iii) ಸರ್ಕಾರಿ ಕಂಪನಿ;

(iv) ಸರ್ಕಾರದ ನಿಯಂತ್ರಣದಲ್ಲಿರುವ ಅಥವಾ ಸರ್ಕಾರದಿಂದ ನೇರವಾಗಿ ಹಣಕಾಸು ಸೌಲಭ್ಯವನ್ನು ಪಡೆಯುತ್ತಿರುವ ಬ್ಯಾಂಕ್‌ಗಳು, ನಿಗಮ ಅಥವಾ ಉದ್ಯಮ.

**308ಎಎ. ಚುನಾವಣೆಗಳ ವೇಳಾಪಟ್ಟಿ.–** ರಾಜ್ಯ ಚುನಾವಣಾ ಆಯೋಗವು ಪಂಚಾಯತ್‌ನ ಅವಧಿಯು ಪೂರ್ಣಗೊಳ್ಳುವುದಕ್ಕೆ ಮೊದಲು ಚುನಾವಣಾ ಪ್ರಕ್ರಿಯೆಯನ್ನು ಪೂರ್ಣಗೊಳಿಸತಕ್ಕದ್ದು ಮತ್ತು ಚುನಾವಣಾ ವೇಳಾಪಟ್ಟಿಯ ಅಧಿಸೂಚನೆಯನ್ನು ಹೊರಡಿಸುವುದಕ್ಕೂ ಮೊದಲಿನ ನಲವತ್ತೈದು ದಿನಗಳಿಗೆ ಕಡಿಮೆ ಇಲ್ಲದಂತೆ ಸ್ಥಾನಗಳ ಮೀಸಲಾತಿಯನ್ನು ಮತ್ತು ಚುನಾವಣಾ ವೇಳಾಪಟ್ಟಿಯನ್ನು ಘೋಷಿಸತಕ್ಕದ್ದು.

**308ಎಬಿ. ನಾಮ ಪತ್ರಗಳನ್ನು ಸಲ್ಲಿಸುವುದು ಮೊದಲಾದವುಗಳಿಗಾಗಿ ದಿನಾಂಕಗಳ ಅಧಿಸೂಚನೆ.** (1) ಸದಸ್ಯನನ್ನು ಆಯ್ಕೆ ಮಾಡುವಂತೆ ಚುನಾವಣಾ ಕ್ಷೇತ್ರವನ್ನು ಕೋರುವ ಅಧಿಸೂಚನೆಯನ್ನು ಹೊರಡಿಸಿದ ಕೂಡಲೇ, ರಾಜ್ಯ ಚುನಾವಣಾ ಆಯೋಗವು ರಾಜ್ಯಪತ್ರದಲ್ಲಿ ಅಧಿಸೂಚನೆಯ ಮೂಲಕ,–

(ಎ) ನಾಮ ಪತ್ರಗಳನ್ನು ಸಲ್ಲಿಸುವುದಕ್ಕೆ ಕೊನೆಯ ದಿನಾಂಕವನ್ನು ಗೊತ್ತುಪಡಿಸತಕ್ಕದ್ದು, ಆ ಕೊನೆಯ ದಿನಾಂಕವು ಮೊದಲು ಹೇಳಿರುವ ಅಧಿಸೂಚನೆಯ ಪ್ರಕಟಣೆಯ ದಿನಾಂಕದ ತರುವಾಯ ಬರುವ ಮೂರನೆಯ ದಿನವಾಗಿರತಕ್ಕದ್ದು ಅಥವಾ ಆ ದಿನವು ಸಾರ್ವಜನಿಕ ರಜಾ ದಿನವಾಗಿದ್ದರೆ, ಸಾರ್ವತ್ರಿಕ ರಜಾ ದಿನವಾಗಿರದ, ತರುವಾಯ ಬರುವ ದಿನವಾಗಿರತಕ್ಕದ್ದು;

(ಬಿ) ನಾಮಪತ್ರಗಳ ಪರಿಶೀಲನೆಗೆ ದಿನಾಂಕವನ್ನು ಗೊತ್ತುಪಡಿಸತಕ್ಕದ್ದು. ಆ ದಿನಾಂಕವು ನಾಮಪತ್ರಗಳನ್ನು ಸಲ್ಲಿಸುವ ಕೊನೆಯ ದಿನಾಂಕಕ್ಕೆ ನಿಕಟ ತರುವಾಯದ ದಿನವಾಗಿರತಕ್ಕದ್ದು ಅಥವಾ ಆ ದಿನವು ಸಾರ್ವಜನಿಕ ರಜಾ ದಿನವಾಗಿದ್ದರೆ, ಸಾರ್ವತ್ರಿಕ ರಜಾ ದಿನವಾಗಿರದ ತರುವಾಯ ಬರುವ ದಿನವಾಗಿರತಕ್ಕದ್ದು;

(ಸಿ) ನಾಮಪತ್ರಗಳನ್ನು ವಾಪಸ್ಸು ಪಡೆಯುವುದಕ್ಕೆ ಕೊನೆಯ ದಿನಾಂಕವನ್ನು ಗೊತ್ತುಪಡಿಸತಕ್ಕದ್ದು. ಆ ಕೊನೆಯ ದಿನಾಂಕವು ನಾಮಪತ್ರಗಳ ಪರಿಶೀಲನೆಗೆ ಗೊತ್ತುಪಡಿಸಿರುವ ದಿನಾಂಕದ ತರುವಾಯದ ಎರಡನೆಯ ದಿನವಾಗಿರತಕ್ಕದ್ದು ಅಥವಾ ಆ ದಿನವು ಸಾರ್ವಜನಿಕ ರಜಾ ದಿನವಾಗಿದ್ದರೆ, ಸಾರ್ವತ್ರಿಕ ರಜಾ ದಿನವಾಗಿರದ ತರುವಾಯ ಬರುವ ದಿನವಾಗಿರತಕ್ಕದ್ದು;

(ಡಿ) ಮತದಾನವು, ಅವಶ್ಯವಾದರೆ, ಮತದಾನಕ್ಕೆ ದಿನಾಂಕವನ್ನು ಅಥವಾ ದಿನಾಂಕಗಳನ್ನು ಗೊತ್ತುಪಡಿಸತಕ್ಕದ್ದು ಅಥವಾ ಆ ಪೈಕಿ ಮೊದಲನೆಯ ದಿನಾಂಕವು ಗ್ರಾಮ ಪಂಚಾಯತ್‌ಗೆ ನಡೆಯುವ ಚುನಾವಣೆ ಸಂದರ್ಭದಲ್ಲಿ, ಐದನೆಯ ದಿನಕ್ಕೆ ಮುಂಚಿನದಲ್ಲದ ದಿನಾಂಕವಾಗಿರತಕ್ಕದ್ದು ಮತ್ತು ತಾಲ್ಲೂಕು ಪಂಚಾಯತ್‌ಗಳಿಗೆ ಮತ್ತು ಜಿಲ್ಲಾ ಪಂಚಾಯತ್‌ಗೆ ಚುನಾವಣೆ ಸಂದರ್ಭದಲ್ಲಿ ಉಮೇದುವಾರಿಕೆಗಳನ್ನು ವಾಪಸ್ಸು ಪಡೆಯುವುದಕ್ಕೆ ನಿಗದಿ ಮಾಡಿದ ಕೊನೆಯ ದಿನಾಂಕದ ತರುವಾಯದ ಏಳನೆಯ ದಿನಕ್ಕಿಂತ ಮುಂಚಿನ ದಿನಾಂಕವಾಗಿರತಕ್ಕದ್ದು;

(ಇ) ಯಾವ ದಿನಾಂಕಕ್ಕೆ ಮುಂಚೆ ಚುನಾವಣೆಯನ್ನು ಮುಕ್ತಾಯಗೊಳಿಸತಕ್ಕದ್ದೋ ಆ ದಿನಾಂಕವನ್ನು ಗೊತ್ತುಪಡಿಸತಕ್ಕದ್ದು;

(ಎಫ್) ಪಂಚಾಯತ್‌ಗಳಿಗೆ ಸದಸ್ಯರ ಚುನಾವಣಾ ಪ್ರಕ್ರಿಯೆಯನ್ನು ಸಾಧ್ಯವಾಗಬಹುದಾದಷ್ಟರ ಮಟ್ಟಿಗೆ ಚುನಾವಣಾ ಅಧಿಸೂಚನೆಯನ್ನು ಹೊರಡಿಸಿದ ಹತ್ತು ಕೆಲಸದ ದಿನಗಳೊಳಗೆ ಮುಕ್ತಾಯಗೊಳಿಸತಕ್ಕದ್ದು."

**308ಎಸಿ. ಚುನಾವಣೆ ಕಾಲದಲ್ಲಿ ಭ್ರಷ್ಟಾಚಾರಗಳನ್ನು ತಡೆಗಟ್ಟುವುದು.**–(1)ಚುನಾವಣಾ ಕಾಲದಲ್ಲಿ ಲಂಚಗುಳಿತನ ಮತ್ತು ಅನಗತ್ಯ ಪ್ರಭಾವ ಬೀರುವಂತಹ ಭ್ರಷ್ಟಾಚಾರಗಳನ್ನು ತಡೆಯುವ ದೃಷ್ಟಿಯಿಂದ, ರಾಜ್ಯ ಚುನಾವಣಾ ಆಯೋಗವು ಈ ಮುಂದಿನ ಕ್ರಮಗಳನ್ನು ಕೈಗೊಳ್ಳತಕ್ಕದ್ದು, ಎಂದರೆ:–

(ಎ) ನೀತಿ ಸಂಹಿತೆಯನ್ನು ಚುನಾವಣಾ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕದಿಂದ ಫಲಿತಾಂಶಗಳನ್ನು ಘೋಷಿಸುವ ದಿನಾಂಕದವರೆಗೆ ಜಾರಿಗೆ ತರತಕ್ಕದ್ದು;

(ಬಿ) ರಿಟರ್ನಿಂಗ್ ಆಫೀಸರ್‌ಗಳು ಪ್ರತಿಯೊಂದು ಮತಗಟ್ಟೆಯಲ್ಲಿ ಚುನಾವಣಾ ಪ್ರಕ್ರಿಯೆಗಳ ವಿಡಿಯೋ–ಗ್ರಾಫಿಕ್ ಚಿತ್ರೀಕರಣ ಮಾಡಿರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು;

(ಸಿ) ಯಾವ ಪಂಚಾಯತ್ ಪ್ರದೇಶದಲ್ಲಿ ನೀತಿ ಸಂಹಿತೆಯು ಜಾರಿಯಲ್ಲಿರುತ್ತದೋ ಆ ಪಂಚಾಯತ್ ಪ್ರದೇಶದ ಒಳಗೆ ನೀತಿ ಸಂಹಿತೆಯು ಜಾರಿಯಲ್ಲಿರುವ ಇಡೀ ಅವಧಿವರೆಗೆ ಎಲ್ಲ ಮದ್ಯದ ಅಂಗಡಿಗಳನ್ನು ಹಾಗೂ ಮದ್ಯ ತಯಾರಿಕಾ ಘಟಕಗಳನ್ನು ಮುಚ್ಚತಕ್ಕದ್ದು. ಮದ್ಯದ ಅಂಗಡಿಗಳ ಮತ್ತು ಮದ್ಯ ತಯಾರಿಕಾ ಘಟಕಗಳ ಮಾಲೀಕರು, ಅಧಿಬೋಗದಾರರು ಮತ್ತು ಸಂದರ್ಭಾನುಸಾರವಾಗಿ ವ್ಯವಸ್ಥಾಪಕರು ಚುನಾವಣಾ ನೀತಿ ಸಂಹಿತೆಯು ಜಾರಿಯಲ್ಲಿರುವ ಅವಧಿಯಲ್ಲಿ ತಮ್ಮ ಘಟಕಗಳನ್ನು ಮುಚ್ಚತಕ್ಕದ್ದು ಮತ್ತು ಮೊಹರು ಮಾಡಿ ಕೀಯನ್ನು ಜಿಲ್ಲಾಧಿಕಾರಿಗಳಿಗೆ ಅಥವಾ ಅಧಿಕಾರ ವ್ಯಾಪ್ತಿಯುಳ್ಳ ಕಾರ್ಯನಿರ್ವಾಹಕ ಮ್ಯಾಜಿಸ್ಟ್ರೇಟ್‌ರವರಿಗೆ ಒಪ್ಪಿಸತಕ್ಕದ್ದು. ಆ ಕಾಲದಲ್ಲಿ ಯಾರಾದರೂ ಮದ್ಯವನ್ನು ಸ್ವಾಧೀನದಲ್ಲಿಟ್ಟು ಕೊಂಡಿರುವುದು ಅಥವಾ ಮದ್ಯವನ್ನು ಸೇವಿಸಿದ ತರುವಾಯ ಸಾರ್ವಜನಿಕ ಉಪದ್ರವ, ಬೀದಿ ರಂಪಾಟ ಮಾಡುತ್ತಿರುವುದು ಕಂಡುಬಂದರೆ ಮುನ್ನೆಚ್ಚರಿಕೆ ಕ್ರಮವಾಗಿ ಚುನಾವಣೆ ಮುಕ್ತಾಯವಾಗುವವರೆಗೆ ಅವರನ್ನು ಕಸ್ಟಡಿಯಲ್ಲಿ ಇಡತಕ್ಕದ್ದು. ನೀತಿ ಸಂಹಿತೆ ಜಾರಿಯಲ್ಲಿರುವ ಅವಧಿಯಲ್ಲಿ ಮಾಡುವ ಯಾವುದೇ ಉಲ್ಲಂಘನೆಗಳು ಸಂಜ್ಞೇಯ ಮತ್ತು ಜಾಮೀನುರಹಿತ ಅಪರಾಧಗಳಾಗತಕ್ಕದ್ದು ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಸುಸಂಗತ ಕಾನೂನಿನ ಮೇರೆಗೆ ಜುಲ್ಮಾನೆಯ ಮತ್ತು ಕಾರಾವಾಸ ಶಿಕ್ಷೆಯ ದಂಡನೆಗೆ ಒಳಪಡತಕ್ಕದ್ದು."

**72. 309ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 309ನೇ ಪ್ರಕರಣದಲ್ಲಿ (3)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(4) ಗ್ರಾಮೀಣ ಮಟ್ಟದಿಂದ ರಾಜ್ಯಮಟ್ಟದವರೆಗಿನ ಅವಶ್ಯಕತೆಗಳನ್ನು ಈಡೇರಿಸುವ ಸಲುವಾಗಿ ಎಲ್ಲ ಯೋಜನೆಗಳನ್ನು ತಾಲ್ಲೂಕು ಯೋಜನಾ ಮತ್ತು ಅಭಿವೃದ್ಧಿ ಸಮಿತಿಗಳು ಮತ್ತು ಜಿಲ್ಲಾ ಯೋಜನಾ ಸಮಿತಿಗಳ ಮೂಲಕ ರೂಪಿಸತಕ್ಕದ್ದು."

**73. 309ಎ ಯಿಂದ 309ಎಚ್ ವರೆಗೆ ಹೊಸ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 309ನೇ ಪ್ರಕರಣದ ತರುವಾಯ ಈ ಮುಂದಿನ ಹೊಸ ಪ್ರಕರಣಗಳನ್ನು ಸೇರಿಸತಕ್ಕದ್ದು, ಎಂದರೆ:–

"**309ಎ. ಪಂಚಾಯತ್‌ಗಳಿಗಾಗಿ ವಿಕೇಂದ್ರೀಕರಣ ಯೋಜನೆ.–** ಸ್ವಯಂ–ಆಡಳಿತ ಸಂಸ್ಥೆಗಳಾದ ಪಂಚಾಯತ್‌ಗಳು ಸಾಮಾಜಿಕ ನ್ಯಾಯ ಸೇರಿದಂತೆ, ಪಂಚಾಯತ್‌ಗಳಿಗೆ ಪ್ರಕಾರ್ಯಗಳನ್ನು, ಕಾರ್ಯನಿರ್ವಾಹಕರನ್ನು ಮತ್ತು ನಿಧಿಗಳನ್ನು ಒಟ್ಟಾರೆ ಹಾಗೂ ಏಕಕಾಲದಲ್ಲಿ ವಹಿಸಿಕೊಟ್ಟು ಸರ್ವತೋಮುಖ ಅಭಿವೃದ್ಧಿಯನ್ನು ಸಾಧಿಸತಕ್ಕದ್ದು. ಸುರಕ್ಷಿತವಲ್ಲದ ವರ್ಗಗಳ ಹಿತಾಸಕ್ತಿಗಳಿಗೆ ಒತ್ತು ನೀಡಿ ಎಲ್ಲ ವರ್ಗಗಳ ಜನರ ಅಗತ್ಯತೆಗಳನ್ನು ನಿರ್ಧರಿಸಿ ನಿರ್ಣಯಿಸುವ ಮತ್ತು ಅವುಗಳಿಗೆ ಆದ್ಯತೆ ನಿಗದಿ ಮಾಡಿ ತಳಮಟ್ಟದಿಂದ ಅಭಿವೃದ್ಧಿಯಾಗುವಂತೆ ಯೋಜನೆಗಳನ್ನು ರೂಪಿಸತಕ್ಕದ್ದು.

**309ಬಿ. ದೂರದೃಷ್ಠಿ ಯೋಜನೆ.–(1)** ಪ್ರತಿಯೊಂದು ಹೊಸದಾಗಿ ಚುನಾಯಿತವಾದ ಗ್ರಾಮ ಪಂಚಾಯತಿಯು, ಅದರ ರಚನೆಯ ದಿನಾಂಕದಿಂದ ಮೂರು ತಿಂಗಳೊಳಗಾಗಿ, ಜನವಸತಿ ಸಭಾ, ವಾರ್ಡ್ ಸಭಾ, ಮತ್ತು ಗ್ರಾಮ ಸಭೆಗಳ ಸದಸ್ಯರನ್ನು ಅದರ ಪ್ರದೇಶದ ಸಂಪನ್ಮೂಲಗಳನ್ನು, ಜನಸಂಖ್ಯೆ ಮತ್ತು ಅಗತ್ಯಗಳನ್ನು ತೋರಿಸುವ ಸಹಭಾಗಿ ಗ್ರಾಮೀಣ ಪರಾಮರ್ಶನವನ್ನು ಕೈಗೊಳ್ಳತಕ್ಕದ್ದು.

(2) ಗ್ರಾಮ ಪಂಚಾಯತಿಯ, ಕಾರ್ಯಸಾಧನೆ ಪದ್ಧತಿಯನ್ನು ಬಳಸಿಕೊಂಡು ಕ್ರಮ ಕೈಗೊಳ್ಳುವುದಕ್ಕಾಗಿ ಗುರಿಗಳನ್ನು ಹೊಂದಿರುವ ಮತ್ತು ಅಭಿವೃದ್ಧಿ ಪ್ರತಿಫಲದ ಸೂಚಿಗಳಿಗೆ ಸ್ಥಳೀಯ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಸ್ಥಾಪಿಸಿದ ಅಭಿವೃದ್ಧಿ ಮೈಲಿ ಗುರುತುಗಳು ಅಭಿವೃದ್ಧಿಯ ಆಧಾರದ ಮೇಲೆ ಪಂಚಾಯತ್ ಪೂರ್ಣ ಅವಧಿಗಾಗಿ ದೂರದೃಷ್ಠಿ ಯೋಜನೆಯನ್ನು ಮುಂದಾಲೋಚನೆ ಸಿದ್ದಪಡಿಸತಕ್ಕದ್ದು.

(3) ದೂರದೃಷ್ಠಿ ಯೋಜನೆಯ ತನ್ನ ಅವಧಿಯ ಮುಂದಿನ ಐದು ವರ್ಷಗಳಿಗಾಗಿ ಪ್ರತಿವರ್ಷಕ್ಕೆ ಅಗತ್ಯ–ಆಧಾರಿತ ವಾರ್ಷಿಕ ಯೋಜನೆಗಳನ್ನು ನಿರ್ಮಿಸುವ ಆಧಾರದಲ್ಲಿ ರೂಪಿಸತಕ್ಕದ್ದು. ಆದ್ಯತೆ ವಿಷಯಗಳು ಜವಾಬ್ದಾರಿ ನಕ್ಷೆಯಲ್ಲಿ ಹೇಳಲಾದ ಆದ್ಯತಾರ್‍ಯಾಂಕಿಂಗ್ ವಿಧಾನದ ಆಧಾರದಲ್ಲಿರತಕ್ಕದ್ದು.

(4) ಮುಂದಿನ ಹಣಕಾಸು ವರ್ಷದ ಅವಧಿಯಲ್ಲಿ ನಿಧಿಗಳ ಲಭ್ಯತೆಗೆ ಒಳಪಟ್ಟು ಪ್ರತಿಯೊಂದು ಗ್ರಾಮ ಪಂಚಾಯತಿಯ ಅದೇ ವರ್ಷದ ಅಕ್ಟೋಬರ್ ಒಳಗಾಗಿ ಕ್ರೋಢೀಕರಣ ಮತ್ತು ಸಂಯೋಜನೆಗಾಗಿ ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಗೆ ತಮ್ಮ ವಾರ್ಷಿಕ ಕರಡು ಯೋಜನೆಗಳನ್ನು ಸಲ್ಲಿಸತಕ್ಕದ್ದು.

**ವಿವರಣೆ:–** 309ಎ, 309ಬಿ ಪ್ರಕರಣದ ಉದ್ದೇಶಕ್ಕಾಗಿ ಮತ್ತು ಅಧಿನಿಯಮದಲ್ಲಿ ಸದರಿ ಪದಾವಳಿಗಳು ಬರುವಕಡೆಗಳಲ್ಲಿ:

(1) "ಸಹಭಾಗೀ ಗ್ರಾಮೀಣ ಪರಾಮರ್ಶೆ"ಯಲ್ಲಿ ಈ ಅಧಿನಿಯಮದ ಅಡಿಯಲ್ಲಿ ಪಂಚಾಯತ್‌ಗಳ ದೀರ್ಘಾವಧಿ ದೂರದೃಷ್ಟಿ ಯೋಜನೆಗೆ ಅಥವಾ ವಾರ್ಷಿಕ ಯೋಜನೆಗಳಿಗೆ ಸಂಬಂಧಪಟ್ಟಂತೆ ಕೈಗೆತ್ತಿಕೊಳ್ಳಲಾದ ವಾಸ್ತವಾಂಶಗಳ ಕುರಿತಂತೆ ಅಧ್ಯಯನ, ವಿಶ್ಲೇಷಣೆ ಮತ್ತು ಪರಾಮರ್ಶೆ ಒಳಗೊಂಡಿರುತ್ತವೆ.

(2) "ಕಾರ್ಯಸಾಧನೆ ಪದ್ದತಿ" ಎಂದರೆ ಮೂರು ಪ್ರಾಥಮಿಕ ಘಟಕಗಳಾದ–ಅಳತೆಗೋಲು, ಪ್ರತಿಕ್ರಿಯೆ ಮತ್ತು ಧನಾತ್ಮಕ ಮರು ಜಾರಿ ಒಳಗೊಂಡಿರುವ, ವೈಜ್ಞಾನಿಕ ಆಧಾರಿತ, ದತ್ತಾಂಶ ಆಧಾರಿತ ನಿರ್ವಹಣಾ ಪದ್ಧತಿ ಮತ್ತು ಇದರಲ್ಲಿ ಅತ್ಯಗತ್ಯ ಧ್ಯೇಯೋದ್ದೇಶಗಳನ್ನು ಮತ್ತು ಆದ್ಯತೆಗಳನ್ನು ಸಾಧಿಸುವ ನಿಟ್ಟಿನಲ್ಲಿ ಸಂಪನ್ಮೂಲಗಳನ್ನು, ವ್ಯವಸ್ಥೆಗಳನ್ನು ಹಾಗೂ ಸಿಬ್ಬಂದಿವರ್ಗದವರನ್ನು ಸರಿಹೊಂದಾಣಿಕೆ ಮಾಡುವ ವಿಧಾನದ ಮೂಲಕ ಪರಿಣಾಮಕಾರಿಯಾಗಿ ಮತ್ತು ದಕ್ಷತೆಯಿಂದ ನಿರಂತರವಾಗಿ ಗುರಿಗಳನ್ನು ಸಾಧಿಸುತ್ತಿರುವುದನ್ನು ಸುನಿಶ್ಚಿತಪಡಿಸುವಂಥ ಕಾರ್ಯಚಟುವಟಿಕೆಗಳು ಸೇರುತ್ತವೆ.

(3) "ಆದ್ಯತಾ ರ್‍ಯಾಂಕಿಂಗ್" ಇದು 'ಆದ್ಯತಾ ನಿಗದಿ ವಿಧಾನ'ವನ್ನು ಬಳಸಿಕೊಂಡು ಫಲಾನುಭವಿಗಳನ್ನು, ಯೋಜನೆಗಳನ್ನು, ಕಾರ್ಯಕ್ರಮಗಳನ್ನು ಮತ್ತು ಪರಿಯೋಜನೆಗಳನ್ನು ಆಯ್ಕೆ ಮಾಡಿಕೊಳ್ಳುವಾಗ ಪ್ರದೇಶದ ಹಿಂದುಳಿದಿರುವಿಕೆ, ಅವಶ್ಯಕತೆಯತುರ್ತು, ಪರಿಣಾಮಕಾರಿ ಹಂತ ಮತ್ತು ವ್ಯಾಪ್ತಿಯ ಆದ್ಯತೆಗಳನ್ನು ನಿರ್ಧರಿಸುವುದಕ್ಕೆ ಸೂಚಕಗಳನ್ನು ನೀಡುತ್ತದೆ.

**309ಸಿ. ತಾಲ್ಲೂಕು ಪಂಚಾಯತ್ ಯೋಜನೆ.– (1)** 309ಡಿ ಪ್ರಕರಣದ ಅಡಿಯಲ್ಲಿ ರಚನೆಯಾದ ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಯ ಮುಂದೆ ಮಂಡಿಸುವುದಕ್ಕಾಗಿ ತಾಲ್ಲೂಕು ಮಟ್ಟದಲ್ಲಿ ಎಲ್ಲಾ ಗ್ರಾಮ ಪಂಚಾಯತಿಗಳ ಯೋಜನೆಗಳನ್ನು ಡಿಜಿಟಲ್ ನಮೂನೆಯಲ್ಲಿ ಕ್ರೋಢೀಕರಿಸುವುದಕ್ಕೆ ತಾಲ್ಲೂಕು ಪಂಚಾಯತಿಗಳು ಹೊಣೆಯಾಗತಕ್ಕದ್ದು.

(2) ತಾಲ್ಲೂಕು ಪಂಚಾಯತಿಯು ಜಿಲ್ಲಾ ಪಂಚಾಯತಿಗೆ ಈ ಯೋಜನೆಯ ಡಿಜಿಟಲ್ ಪ್ರತಿಯನ್ನು ಕೂಡಾ ಕಳುಹಿಸತಕ್ಕದ್ದು.

**309ಡಿ. ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿ.– (1)** ಪ್ರತಿಯೊಂದು ತಾಲ್ಲೂಕಿನಲ್ಲಿ ಈ ಕೆಳಗಿನವುಗಳನ್ನೊಳಗೊಂಡ ತಾಲ್ಲುಕು ಮಟ್ಟದಲ್ಲಿ ಯೋಜನೆಯ ಸಂಯೋಜನೆಯನ್ನು ಕೈಗೊಳ್ಳುವ ಉದ್ದೇಶಕ್ಕಾಗಿ ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಯು ಸ್ಥಾಪಿತವಾಗತಕ್ಕದ್ದು, ಎಂದರೆ:–

(i) ತಾಲ್ಲೂಕಿನ ದೊಡ್ಡ ಭಾಗಗಳನ್ನು ಪ್ರತಿನಿಧಿಸುವ ವಿಧಾನಸಭೆ ಸದಸ್ಯರು – **ಅಧ್ಯಕ್ಷರು**

(ii) ಸಂಬಂಧಪಟ್ಟ ತಾಲ್ಲೂಕು ಪಂಚಾಯತಿಯ ಅಧ್ಯಕ್ಷ – **ಕೋ ಛೇರ್‌ಮನ್**

(iii) ತಾಲ್ಲೂಕಿನ ಕೇಂದ್ರ ಸ್ಥಾನದಲ್ಲಿ ದೊಡ್ಡ ನಗರ ಸ್ಥಳೀಯ ಸ್ವಯಂ ಆಡಳಿತದ ಅಧ್ಯಕ್ಷ – **ಕೋ ಚೇರ್‌ಪರ್ಸನ್**

(iv) ತಾಲ್ಲೂಕಿನ ಎಲ್ಲಾ ಗ್ರಾಮ ಪಂಚಾಯತಿಗಳ ಅಧ್ಯಕ್ಷರ ಪೈಕಿ ಲಾಟರಿಯ ಮೂಲಕ ಆಯ್ಕೆ ಮಾಡಲಾದ ಗ್ರಾಮ ಪಂಚಾಯತಿಯ ಅಧ್ಯಕ್ಷ – **ವೈಸ್ ಚೇರ್‌ಪರ್ಸನ್**

(v) ಲೋಕಸಭೆ ಮತ್ತು ರಾಜ್ಯ ವಿಧಾನಸಭೆಯ ಸದಸ್ಯರು ತಾಲ್ಲೂಕಿನ ಭಾಗ ಅಥವಾ ಪೂರ್ಣ ತಾಲ್ಲೂಕನ್ನು ಪ್ರತಿನಿಧಿಸುವ ತಾಲ್ಲೂಕಿನೊಳಗೆ ಮತದಾನ ಕ್ಷೇತ್ರಗಳನ್ನು ಹೊಂದಿರುವ ತಾಲ್ಲೂಕುಗಳಿಗೆ ಮತದಾರನೆಂದು ನೋಂದಾಯಿತವಾಗಿರುವ ರಾಜ್ಯಸಭಾ ಮತ್ತು ರಾಜ್ಯ ವಿಧಾನ ಪರಿಷತ್‌ನ ಸದಸ್ಯರು –**ಸದಸ್ಯರು**

(vi) ಸಂಬಂಧಪಟ್ಟ ತಾಲ್ಲೂಕು ಪಂಚಾಯತ್ ಉಪಾಧ್ಯಕ್ಷ – **ಸದಸ್ಯರು**

(vii) ಸಾಮಾಜಿಕ ನ್ಯಾಯ ಸಮಿತಿಯ ಚೇರ್‌ಮನ್ – **ಸದಸ್ಯರು**

(viii) ಲಾಟರಿಯ ಮೂಲಕ ಆಯ್ಕೆಯಾದ ಗ್ರಾಮ ಪಂಚಾಯತ್‌ನ ಐವರು ಅಧ್ಯಕ್ಷರು, ಅದರಲ್ಲಿ ಒಬ್ಬರು ಮಹಿಳೆಯಾಗಿರತಕ್ಕದ್ದು ಮತ್ತು ಒಬ್ಬರು ಅನುಸೂಚಿತ ಜಾತಿಗಳಿಗೆ ಮತ್ತು ಒಬ್ಬರು ಅನುಸೂಚಿತ ಪಂಗಡಗಳಿಗೆ ಸೇರಿದವರಾಗಿರತಕ್ಕದ್ದು **– ವಿಶೇಷ ಆಹ್ವಾನಿತರು**

(ix) ತಾಲ್ಲೂಕಿನೊಳಗೆ ಇರುವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಅಧ್ಯಕ್ಷರು **–ವಿಶೇಷ ಆಹ್ವಾನಿತರು**

(x) ತಾಲ್ಲೂಕಿನೊಳಗೆ ಇರುವ ಪಿಸಿಎಆರ್‌ಡಿ ಅಧ್ಯಕ್ಷರು **–ವಿಶೇಷ ಆಹ್ವಾನಿತರು**

(xi) ಜಿಲ್ಲೆಯಲ್ಲಿನ ಮುಂಚೂಣಿ ಬ್ಯಾಂಕಿನ ಜಿಲ್ಲಾ ಮ್ಯಾನೇಜರ್ **–ವಿಶೇಷ ಆಹ್ವಾನಿತರು**

(xii) ಮೂವರು ತಜ್ಞರು ತಾಂತ್ರಿಕ ವಲಯದಿಂದ ಒಬ್ಬರು (ಸಂಬಂಧಪಟ್ಟ ತಾಲ್ಲೂಕಿನ ಇಂಜಿನಿಯರಿಂಗ್ ಕಾಲೇಜು/ಪಾಲಿಟೆಕ್ನಿಕ್/ಐ.ಟಿ.ಐ) ಪ್ರಾಂಶುಪಾಲರು ಮತ್ತು ಸೇವಾ ವಲಯದಿಂದ ಒಬ್ಬರು (ಸಮಾಜವಿಜ್ಞಾನ) ಸ್ಥಳೀಯ ಕಾಲೇಜಿನ ಪ್ರಾಂಶುಪಾಲರು), ಗ್ರಾಮೀಣಾಭಿವೃದ್ಧಿಯಿಂದ ಒಬ್ಬರು( ಕೃಷಿ ವಿಜ್ಞಾನ ಕೇಂದ್ರದ ನಿರ್ದೇಶಕರು) **– ವಿಶೇಷ ಆಹ್ವಾನಿತರು**

(2) ಸಂಬಂಧಪಟ್ಟ ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಯು ಸಮಿತಿಯ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(3) ಸಂಬಂಧಪಟ್ಟ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ವಿಶೇಷ ಆಹ್ವಾನಿತರು ಅಥವಾ ಪದನಿಮಿತ್ತ ಸದಸ್ಯರನ್ನು ನಾಮನಿರ್ದೇಶನ ಮಾಡತಕ್ಕದ್ದು. ಈ ಸದಸ್ಯರು ಪದಾವಧಿಯ ತಾಲ್ಲೂಕು ಪಂಚಾಯತಿಯ ಪದಾವಧಿಯೊಂದಿಗೆ ಮುಕ್ತಾಯವಾಗತಕ್ಕದ್ದು ಮತ್ತು ಪದನಿಮಿತ್ತ ಸದಸ್ಯರ ಪದಾವಧಿಯೊಂದಿಗೆ ಅಥವಾ ತಾಲ್ಲೂಕು ಪಂಚಾಯತಿಯ ಪದಾವಧಿಯೊಂದಿಗೆ ಇದರಲ್ಲಿ ಯಾವುದು ಮೊದಲೋ ಅದರೊಂದಿಗೆ ಮುಕ್ತಾಯವಾಗತಕ್ಕದ್ದು.

**309ಇ. ಯೋಜನೆ ಮತ್ತು ಅಭಿವೃದ್ಧಿಯ ಕಾರ್ಯವಿಧಾನ.– (1)** ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಯು ಎಲ್ಲಾ ಪಂಚಾಯತಿಗಳ ಮತ್ತು ನಗರ ಸ್ಥಳೀಯ ಸ್ವಯಂ ಆಡಳಿತಗಳು ಸಲ್ಲಿಸಿದ ಕರಡು ವಾರ್ಷಿಕ ಯೋಜನೆಗಳನ್ನು ಸ್ವೀಕರಿಸತಕ್ಕದ್ದು ಮತ್ತು ತಾಲ್ಲೂಕು ಮಟ್ಟದಲ್ಲಿ ಪ್ರತಿಯೊಂದು ವಲಯದ ಆದ್ಯತೆಗಳನ್ನು ವಲಯವಾರು ಗುರುತಿಸಿ ಕ್ರೋಢೀಕರಿಸತಕ್ಕದ್ದು.

(2) ಆದ್ಯತೆ ನಕಾಶೆ ಮತ್ತು ಯೋಜನೆಗಳ ಕ್ರೋಢೀಕರಣ ವಿಧಾನವನ್ನು ಅನುಸರಿಸಿ ಆದ್ಯತೆ ವಿಷಯಗಳ ಮೂಲಕ ಮಧ್ಯಂತರ ಮಟ್ಟದಲ್ಲಿ ಸಂಯೋಜನೆ ಕಾರ್ಯವಿಧಾನವನ್ನು ಸಾಧಿಸತಕ್ಕದ್ದು.

(3) ಈ ಪ್ರಕರಣದಲ್ಲಿ ಒಳಗೊಂಡಿರುವುದಾವುದೂ ಗ್ರಾಮ ಪಂಚಾಯತಿಗಳ ತಾಲ್ಲೂಕು ಪಂಚಾಯತ್ ಅಥವಾ ಸಂದರ್ಭಾನುಸಾರವಾಗಿ ನಗರ ಸ್ಥಳೀಯ ಸ್ವಯಂ ಆಡಳಿತಗಳ ಯೋಜನೆಗಳಲ್ಲಿ ಶಿಫಾರಸ್ಸುಗಳು ಮತ್ತು ಆದ್ಯತೆ ಬದಲಾಯಿಸಲು, ಮಾರ್ಪಡಿಸಲು ಅಥವಾ ವ್ಯತ್ಯಾಸಗೊಳಿಸಲು ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಗೆ ಅಧಿಕಾರವಿಲ್ಲ ಎಂದು ಅರ್ಥೈಸತಕ್ಕದ್ದು.

(4) ಸ್ಥಳೀಯ ಸ್ವಯಂ ಆಡಳಿತಗಳ ಪ್ರತಿಯೊಂದು ಪ್ರತ್ಯೇಕ ಘಟಕದ ಆದ್ಯತೆಗಳನ್ನು ಗುರುತಿಸುವ ಗುರಿಯೊಂದಿಗೆ ಕ್ರೋಢೀಕರಣದ ಪರಿಣಾಮವಾಗಿ ಮಧ್ಯಂತರ ಮಟ್ಟದಲ್ಲಿ ಯೋಜನೆಯು ಮುಂದಿನವುಗಳನ್ನು ಒಳಗೊಳ್ಳತಕ್ಕದ್ದು, ಎಂದರೆ:–

i. ಒಂದು ಅಥವಾ ಹೆಚ್ಚಿನ ಸ್ಥಳೀಯ ಪ್ರಾಧಿಕಾರಗಳ ಮೂಲಕ ನಡೆಯುವ ಸ್ಕೀಮ್‌ಗಳ ಸ್ಥಳ ವಿಸ್ತಾರದ ಸಂಯೋಜನೆ, ಸಾಧನೆಗಳ ಸಂಯೋಜನೆ.

ii. ಅಂತರ ವಲಯಕ್ಕೆ ಸಂಬಂಧಿಸಿದ ಹಲವಾರು ಸ್ಕೀಮ್‌ಗಳ ಸಂಯೋಜನೆ ಎಂದು ಅರ್ಥೈಸಲಾಗುವ ವಲಯವಾರು ಸಂಯೋಜನೆ,

iii. ಅಂತರ್ವಲಯ ಸಂಯೋಜನೆ ಎಂದರೆ ವಿವಿಧ ಸ್ಕೀಮ್‌ಗಳಿಂದ ಸಂಪನ್ಮೂಲಗಳನ್ನು ಸೆಳೆಯುವ ಮೂಲಕ ವಿವಿಧ ಮಧ್ಯಪ್ರವೇಶದಿಂದ ಗರಿಷ್ಠ ಪ್ರಭಾವವನ್ನು ಖಚಿತಪಡಿಸುವುದಕ್ಕಾಗಿ ಗುರಿಯಾಗಿರುವುದು.

iv. ನೇರ ಸಂಯೋಜನೆ ಎಂದರೆ ಉನ್ನತ ಪಂಚಾಯತ್ ಮಟ್ಟಗಳಲ್ಲಿ ಏನು ಮಾಡಬೇಕಿದೆ ಅದನ್ನು ಪ್ರತ್ಯೇಕಗೊಳಿಸುವುದು.

v. ಸಂಪನ್ಮೂಲಗಳ ಸಂಯೋಜನೆ ಎಂದರೆ; ಪಂಚಾಯತ್ ಬಳಸಬಹುದಾದ ಸ್ಥಳೀಯ ಯೋಜನೆಗಳೊಳಗೆ ಸಂಯೋಜಿಸಬಹುದಾದ ಮತ್ತು ಯಾವುದಕ್ಕೂ ಅವು ಹೆಚ್ಚುವರಿ ಸಂಪನ್ಮೂಲಗಳನ್ನು ಕೊಡುಗೆ ನೀಡಬಹುದೇ ಅಂತಹ ಕೇಂದ್ರ ಪ್ರಾಯೋಜಿತ ಮತ್ತು ರಾಜ್ಯ ಪ್ರಾಯೋಜಿತ ಎರಡೂ ವಿವಿಧ ಸ್ಕೀಮ್‌ಗಳ ವರ್ಗೀಕರಣವನ್ನು ಗುರುತಿಸುವುದು ಮತ್ತು ಯೋಜಿಸುವುದನ್ನು ಗಮನಿಸುವುದು.

**309 ಎಫ್. ಜಿಲ್ಲಾ ಪಂಚಾಯತ್ ಯೋಜನೆ.**–ಜಿಲ್ಲಾ ಪಂಚಾಯತಿಗಳು ಜಿಲ್ಲಾ ಪಂಚಾಯತ್‌ನ ಕರಡು ಯೋಜನೆಯನ್ನು ಸಿದ್ಧಪಡಿಸುವುದು ಮತ್ತು ಜಿಲ್ಲಾ ಮಟ್ಟದಲ್ಲಿ ತಾಲ್ಲೂಕು ಪಂಚಾಯತಿಗಳ ಯೋಜನೆಗಳನ್ನು ಕ್ರೋಢೀಕರಿಸುವುದು ಮತ್ತು ಜಿಲ್ಲಾ ಯೋಜನಾ ಸಮಿತಿಯ ಮುಂದೆ ಮಂಡಿಸುವುದಕ್ಕೆ ಜವಾಬ್ದಾರರಾಗತಕ್ಕದ್ದು.

**309 ಜಿ. ಜಿಲ್ಲಾ ಅಭಿವೃದ್ಧಿ ಯೋಜನೆ.– (1)** ಜಿಲ್ಲಾ ಯೋಜನಾ ಸಮಿತಿಯು ಅನುದಾನ ಲಭ್ಯತೆಗೆ ಒಳಪಟ್ಟು, ಈ ಕೆಳಗಿನವುಗಳ ಕುರಿತಂತೆ ಕರಡು ಅಭಿವೃದ್ಧಿ ಯೋಜನೆಯನ್ನು ಸಿದ್ದಪಡಿಸತಕ್ಕದ್ದು, ಎಂದರೆ:–

(i) ಸ್ಥಳ ವಿಸ್ತಾರ ಯೋಜನೆ, ನೀರಿನ ಹಂಚಿಕೆ ಮತ್ತು ಇತರ ಭೌತಿಕ ಮತ್ತು ನೈಸರ್ಗಿಕ ಸಂಪನ್ಮೂಲ, ಮೂಲಸೌಕರ್ಯಗಳ ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆಯ ಒಳಗೊಂಡಂತೆ ಜಿಲ್ಲೆಯಲ್ಲಿ ಪಂಚಾಯತಿಗಳು ಮತ್ತು ನಗರ ಸ್ಥಳೀಯ ಪ್ರಾಧಿಕಾರಗಳ ನಡುವೆ ಸಮಾನ ಆಸಕ್ತಿಗಳ ವಿಷಯಗಳು;

(ii) ಹಣಕಾಸು ಅಥವಾ ಲಭ್ಯವಿರುವ ಸಂಪನ್ಮೂಲಗಳ ವ್ಯಾಪ್ತಿ ಮತ್ತು ವಿಧಾನ.

(2) ಜಿಲ್ಲಾ ಯೋಜನಾ ಸಮಿತಿಯು ಪಂಚಾಯತ್‌ಗಳು ಮತ್ತು ನಗರ ಸ್ಥಳೀಯ ಮತ್ತು ಇತರ ಯೋಜನಾ ಘಟಕಗಳ ಯೋಜನೆಗಳನ್ನು, ಅವುಗಳು ನಡುವೆ ಪರಸ್ಪರ ಸಮಾಲೋಚನೆ ಮತ್ತು ವ್ಯವಹರಿಸುವುದಕ್ಕೆ ಅವಕಾಶ ಕಲ್ಪಿಸುವುದಕ್ಕಾಗಿ ಜೋಡಿಸುವುದು ಮತ್ತು ಗ್ರಾಮೀಣ ಯೋಜನೆಗಳ ವಲಯ ಮತ್ತು ಸ್ಥಳವಿಸ್ತಾರ ವಿಷಯಗಳನ್ನು ಸಂಯೋಜಿಸುವುದಕ್ಕಾಗಿ ಚೌಕಟ್ಟನ್ನು ಕಲ್ಪಿಸುವುದು.

(3) ಜಿಲ್ಲಾ ಯೋಜನಾ ಸಮಿತಿಯ ಕ್ರೋಢೀಕರಣ ಮತ್ತು ಸಂಯೋಜನಾ ಕಾರ್ಯವಿಧಾನವು ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಯು ಸಿದ್ದಪಡಿಸಿದ ಯೋಜನೆಗಳನ್ನು ವ್ಯತ್ಯಾಸಗೊಳಿಸತಕ್ಕದ್ದಲ್ಲ. ಆದರೆ ಈಗಾಗಲೇ ಮೊದಲು ಸೇರಿರುವ ಅಥವಾ ಯೋಜನೆಗಳಲ್ಲಿ ಒಳಗೊಂಡಿರುವ ಯೋಜನೆಗಳನ್ನು ಸೇರಿಸತಕ್ಕದ್ದಲ್ಲ.

(4) ಜಿಲ್ಲಾ ಯೋಜನಾ ಸಮಿತಿಯು ಕ್ರೋಢೀಕೃತ ಯೋಜನೆಯನ್ನು ಸಿದ್ದಪಡಿಸುವಾಗ, ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸುವ ಅಂಥ ಸಂಸ್ಥೆಗಳು ಮತ್ತು ಸಂಘಗಳೊಂದಿಗೆ ಸಮಾಲೋಚಿಸತಕ್ಕದ್ದು.

(5) ಕ್ರೋಢೀಕರಣ ಮತ್ತು ಸಂಯೋಜನೆಯ ಕಾರ್ಯವಿಧಾನವು ಪೂರ್ಣವಾದ ತರುವಾಯ, ಜಿಲ್ಲಾ ಯೋಜನಾ ಸಮಿತಿಯ ರಾಜ್ಯ ಯೋಜನೆಗಳ ಸಂಯೋಜನೆಗೊಳ್ಳುವುದಕ್ಕಾಗಿ ವಿಕೇಂದ್ರಿಕರಣ ಯೋಜನೆ ಮತ್ತು ಅಭಿವೃದ್ಧಿ ಸಮಿತಿಯ ಮೂಲಕ ಸರ್ಕಾರಕ್ಕೆ ಜಿಲ್ಲೆಯ ಯೋಜನೆಗಳನ್ನು ಕಳುಹಿಸತಕ್ಕದ್ದು.

**309 ಎಚ್. ಕೈಗೊಂಡ ಕ್ರಮದ ವರದಿ.– (1)** ಗ್ರಾಮ ಪಂಚಾಯತ, ತಾಲ್ಲೂಕು ಪಂಚಾಯತ, ಮತ್ತು ಜಿಲ್ಲಾ ಪಂಚಾಯತ್‌ಗಳು ಯೋಜನೆಗಳ ಪ್ರಗತಿಯ ಬಗ್ಗೆ ಮತ್ತು ಅವುಗಳನ್ನು ಅಳೆಯುವ ಸೂಚಿಗಳ ಪ್ರತಿಫಲವನ್ನು ಬಳಸುವ ಬಗ್ಗೆ ಸಂಪನ್ಮೂಲ ಲಭ್ಯತೆ ನಿರ್ಧರಿತ ಗುರಿಗಳನ್ನು ವಾರ್ಷಿಕ ಯೋಜನೆಯಲ್ಲಿ ಮಾಡಲಾದ ಪ್ರಾಜೆಕ್ಟ್‌ಗಳ ಮತ್ತು ಸ್ಕೀಮ್‌ಗಳ ಅನುಷ್ಠಾನ ಅಥವಾ ಮಾಡಲು ಅಸಮರ್ಥವಾದುದಕ್ಕೆ ಕಾರಣಗಳು ಇವುಗಳನ್ನು ಹೇಳುವ ಮತ್ತು ಕೈಗೊಂಡ ಕ್ರಮದ ವರದಿಯನ್ನು ಆರು ತಿಂಗಳಿಗೊಮ್ಮೆ ಸಿದ್ದಪಡಿಸತಕ್ಕದ್ದು.

(2) ಎಲ್ಲಾ ಗ್ರಾಮ ಪಂಚಾಯತಿಗಳು ಸಂಬಂಧಪಟ್ಟ ತಾಲ್ಲೂಕು ಪಂಚಾಯತಿಗೆ ತಮ್ಮ ವರದಿಯನ್ನು ಸಲ್ಲಿಸತಕ್ಕದ್ದು. ತಾಲ್ಲೂಕು ಪಂಚಾಯತಿಯು ಎಲ್ಲಾ ಗ್ರಾಮ ಪಂಚಾಯತಿಗಳ ವರದಿಗಳನ್ನು ಕ್ರೋಢೀಕರಿಸತಕ್ಕದ್ದು ಮತ್ತು ತಮ್ಮದೇ ಆದ ವರದಿಯೊಂದಿಗೆ ಜಿಲ್ಲಾ ಪಂಚಾಯತಿಗೆ ಸಲ್ಲಿಸತಕ್ಕದ್ದು, ಮತ್ತು ಜಿಲ್ಲಾ ಪಂಚಾಯತಿಗಳು ಎಲ್ಲಾ ತಾಲ್ಲೂಕು ಪಂಚಾಯತಿಗಳ ವರದಿಗಳನ್ನು ಕ್ರೋಢೀಕರಿಸತಕ್ಕದ್ದು ಮತ್ತು ತಮ್ಮದೇ ಆದ ವರದಿಯೊಂದಿಗೆ ಅದನ್ನೆಲ್ಲಾ ಜಿಲ್ಲಾ ಯೋಜನಾ ಸಮಿತಿಗೆ ಸಲ್ಲಿಸತಕ್ಕದ್ದು.

(3) ಗ್ರಾಮ ಪಂಚಾಯತಿಗಳ ಸಂಯೋಜಿತ ವರದಿಯನ್ನು ತಮ್ಮ ಮುಂದಿನ ಗ್ರಾಮ ಸಭೆಗೆ ಮಂಡಿಸತಕ್ಕದ್ದು.

(4) ಹಾಗೆಯೇ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿಗಳ ವರದಿಗಳನ್ನು ಗ್ರಾಮ ಪಂಚಾಯತ್‌ಗಳಿಗೆ ಗ್ರಾಮ ಸಭೆಗೆ ಹಾಜರುಪಡಿಸುವುದಕ್ಕಾಗಿ ಲಭ್ಯವಾಗುವಂತೆ ಮಾಡತಕ್ಕದ್ದು."

**74. 310ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮ 310ನೇ ಪ್ರಕರಣದಲ್ಲಿ:–

(i) (2)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಜಿಲ್ಲಾ ಯೋಜನಾ ಸಮಿತಿಯು ಈ ಮುಂದಿನವರನ್ನೊಳಗೊಂಡಿರತಕ್ಕದ್ದು, ಎಂದರೆ;

(ಎ) ಸಂಬಂಧಪಟ್ಟ ಜಿಲ್ಲೆಯ ಉಸ್ತುವಾರಿ ಸಚಿವರು **–ಸದಸ್ಯರು**

(ಬಿ) ಜಿಲ್ಲಾ ಪಂಚಾಯತ್‌ನ ಅಧ್ಯಕ್ಷರು **–ಸದಸ್ಯರು**

(ಸಿ) ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಯ ಪದನಿಮಿತ್ತ ಕೋ–ಚೇರ್‌ಪರ್ಸನ್ ಆಗಿರುವ ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರು **–ಸದಸ್ಯರು**

(ಡಿ) ಜಿಲ್ಲೆಯಲ್ಲಿನ ಪ್ರತಿಯೊಂದು ತಾಲ್ಲೂಕಿನಿಂದ ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಯ ವೈಸ್ ಚೇರ್ ಪರ್ಸನ್(ತಾಲ್ಲೂಕು ಗ್ರಾಮ ಪಂಚಾಯತ್ ಮೂಲಕ ಚುನಾಯಿತರಾದವರು) **–ಸದಸ್ಯರು**

(ಇ)ಜಿಲ್ಲಾ ಪಂಚಾಯತಿಗಳು, ತಾಲ್ಲೂಕು ಪಂಚಾಯತ್, ಪಟ್ಟಣ ಪಂಚಾಯತಿಗಳ ಮತ್ತು ಜಿಲ್ಲೆಯಲ್ಲಿ ಗ್ರಾಮೀಣ ಪ್ರದೇಶಗಳ ಮತ್ತು ನಗರ ಪ್ರದೇಶಗಳ ಜನಸಂಖ್ಯೆಯ ನಡುವಿನ ಅನುಪಾತಕ್ಕೆ ಅನುಗುಣವಾಗಿ ಜಿಲ್ಲೆಯಲ್ಲಿ ನಗರಪಾಲಿಕೆ ಮತ್ತು ಪೌರಸಭೆಗಳ ಕೌನ್ಸಿಲರ್‌ಗಳು ಪೈಕಿಯಿಂದ ನೇಮಿಸಲಾದ ವಿಧಾನದಲ್ಲಿ ಚುನಾಯಿತರಾದ ಸದಸ್ಯರ ಒಟ್ಟು ಸಂಖ್ಯೆಯ ಐದನೇ ನಾಲ್ಕಕ್ಕಿಂತ ಕಡಿಮೆ ಇರದ ಅಂತಹ ಸಂಖ್ಯೆಯ ವ್ಯಕ್ತಿಗಳು **–ಸದಸ್ಯರು**

(ii) (3)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) ಪೂರ್ತಿ ಜಿಲ್ಲೆ ಅಥವಾ ಜಿಲ್ಲೆಯ ಭಾಗವನ್ನು ಪ್ರತಿನಿಧಿಸುವ ಲೋಕಸಭೆಯ ಸದಸ್ಯರು, ಜಿಲ್ಲೆಯಲ್ಲಿ ಮತದಾರರೆಂದು ನೋಂದಣಿಯಾಗಿರುವ ರಾಜ್ಯಸಭಾ ಸದಸ್ಯರು, ಜಿಲ್ಲೆಯೊಳಗೆ ಇರುವ ಮತಕ್ಷೇತ್ರಗಳಲ್ಲಿನ ರಾಜ್ಯ ವಿಧಾನಸಭೆಯ ಎಲ್ಲಾ ಸದಸ್ಯರು ಜಿಲ್ಲೆಯಲ್ಲಿ ಮತದಾರರೆಂದು ನೋಂದಣಿಯಾಗಿರುವ ರಾಜ್ಯ ವಿಧಾನಪರಿಷತ್‌ನ ಸದಸ್ಯರು, ಜಿಲ್ಲೆಯ ಡೆಪ್ಯೂಟಿ ಕಮಿಷನರ್‌ರವರು ಜಿಲ್ಲಾ ಯೋಜನಾ ಸಮಿತಿಯ ಶಾಶ್ವತ ಆಹ್ವಾನಿತರಾಗಿರತಕ್ಕದ್ದು".

(iii) (5)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–
"(5) ಜಿಲ್ಲಾ ಯೋಜನಾ ಸಮಿತಿಯ ಚೇರ್ಮನ್‌ರನ್ನು ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಅವರುಗಳ ಪೈಕಿ ಆಯ್ಕೆ ಮಾಡತಕ್ಕದ್ದು".

**75. 310ಎ ಪ್ರಕರಣದ ತಿದ್ದುಪಡಿ:–** ಮೂಲ ಅಧಿನಿಯಮದ 310ಎ ಪ್ರಕರಣದ(2)ನೇ ಉಪಪ್ರಕರಣದಲ್ಲಿ;–

i. (iv) ನೇ ಖಂಡದಲ್ಲಿ "ಸರ್ಕಾರವು ನಾಮನಿರ್ದೇಶನ ಮಾಡಿದ ಜಿಲ್ಲಾ ಪಂಚಾಯತಿಗಳ ಹತ್ತು ಅಧ್ಯಕ್ಷರನ್ನು" ಎಂಬ ಪದಗಳಿಗೆ " ಎಲ್ಲಾ ಜಿಲ್ಲಾ ಪಂಚಾಯತಿಗಳ ಅಧ್ಯಕ್ಷರನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ii. (v) ನೇ ಖಂಡದಲ್ಲಿ "ಒಂದು ಗ್ರಾಮ ಪಂಚಾಯತಿ" ಎಂಬ ಪದಗಳಿಗೆ "ನಾಲ್ಕು ಗ್ರಾಮ ಪಂಚಾಯತಿಗಳ ಅಧ್ಯಕ್ಷರು, ಪ್ರತಿಯೊಂದು ಕಂದಾಯ ವಿಭಾಗದಿಂದ ಒಬ್ಬರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**76. 310ಬಿ ಪ್ರಕರಣದ ಸೇರ್ಪಡೆ:–** ಮೂಲ ಅಧಿನಿಯಮದ 310ಎ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ;–

"**310ಬಿ. ಕರ್ನಾಟಕ ರಾಜ್ಯ ವಿಕೇಂದ್ರಿಕರಣ ಯೋಜನೆ ಮತ್ತು ಅಭಿವೃದ್ಧಿ ಸಮಿತಿ.– (1)** ಅಭಿವೃದ್ಧಿ ಯೋಜನೆಗಳನ್ನು ಮತ್ತು ಆಯವ್ಯಯ ದಸ್ತಾವೇಜಿನೊಂದಿಗೆ ಹಾಜರುಪಡಿಸಬೇಕಾದ ವಾರ್ಷಿಕ ಹಣಕಾಸು ಪುನರಾವಲೋಕನೆಯನ್ನು ರೂಪಿಸುವುದಕ್ಕೆ ಸರ್ಕಾರವನ್ನು ಸಮರ್ಥಗೊಳಿಸುವುದಕ್ಕೆ ಕರ್ನಾಟಕ ರಾಜ್ಯ ವಿಕೇಂದ್ರಿಕರಣ ಯೋಜನೆ ಮತ್ತು ಅಭಿವೃದ್ಧಿ ಸಮಿತಿಯೆಂದು ಕರೆಯಲಾಗುವ ಸಮಿತಿಯನ್ನು ಸ್ಥಾಪಿಸತಕ್ಕದ್ದು.

(2) ಕರ್ನಾಟಕ ರಾಜ್ಯ ವಿಕೇಂದ್ರಿಕರಣ ಯೋಜನೆ ಮತ್ತು ಅಭಿವೃದ್ಧಿ ಸಮಿತಿಯ ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ;–

| | | |
|---|---|---|
| 1. | ಚೇರ್‌ಪರ್ಸನ್ | ಮುಖ್ಯಮಂತ್ರಿ |
| 2. | ವೈಸ್‌ಚೇರ್ಮನ್ | 1) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು<br>2) ಹಣಕಾಸು ಸಚಿವರು<br>3) ಯೋಜನಾ ಸಚಿವರು<br>4) ನಗರಾಭಿವೃದ್ಧಿ ಸಚಿವರು,<br>ಸರ್ಕಾರವು ನಾಮನಿರ್ದೇಶಿಸಿದ ಸಮಾಜೋ ಆರ್ಥಿಕ ಅಭಿವೃದ್ಧಿಯ ಕ್ಷೇತ್ರದಲ್ಲಿ ತಜ್ಞರಾದ ಒಬ್ಬರು ಸರ್ಕಾರೇತರ ಸದಸ್ಯರು |
| 3. | ಸದಸ್ಯರು | 1) ರಾಜ್ಯದ ಅಭಿವೃದ್ಧಿ ಆಯುಕ್ತರು<br>2) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿ<br>3) ನಗರಾಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿ<br>4) ಆರ್ಥಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿ<br>5) ಸರ್ಕಾರವು ನಾಮನಿರ್ದೇಶನ ಮಾಡಿದ ಸ್ಥಳೀಯ ನಿಕಾಯಗಳನ್ನು ಪ್ರತಿನಿಧಿಸುವ ಇಬ್ಬರು ವಿಧಾನಪರಿಷತ್ ಸದಸ್ಯರು.<br>6) ಸರ್ಕಾರವು ನಾಮ ನಿರ್ದೇಶನ ಮಾಡಿದ ಎಂಟು ಸದಸ್ಯರು, ಅವರಲ್ಲಿ<br>(ಎ) ಜಿಲ್ಲಾ ಯೋಜನಾ ಸಮಿತಿಗಳ ಇಬ್ಬರು ಚೇರ್‌ಪರ್ಸನ್ಸ್ ಅವರಲ್ಲಿ ರೆವಿನ್ಯೂ ವಿಭಾಗದಿಂದ ಒಬ್ಬರು ಇರತಕ್ಕದ್ದು.<br>(ಬಿ) ತಾಲ್ಲೂಕು ಯೋಜನೆ ಮತ್ತು ಅಭಿವೃದ್ಧಿ ಸಮಿತಿಗಳ ಇಬ್ಬರು ಚೇರ್‌ಪರ್ಸನ್ಸ್ ಅವರಲ್ಲಿ ರೆವಿನ್ಯೂ ವಿಭಾಗದಿಂದ ಒಬ್ಬರು ಇರತಕ್ಕದ್ದು.<br>(ಸಿ) ಗ್ರಾಮ ಪಂಚಾಯತಿಗಳ ಇಬ್ಬರು ಚೇರ್‌ಪರ್ಸನ್ಸ್– ಅವರಲ್ಲಿ ರೆವಿನ್ಯೂ ವಿಭಾಗದಿಂದ ಒಬ್ಬರು ಇರತಕ್ಕದ್ದು.<br>(ಡಿ) ನಗರ ಸ್ಥಳೀಯ ನಿಕಾಯಗಳ ಇಬ್ಬರು ಚೇರ್‌ಪರ್ಸನ್ಸ್ ನಗರ ಪಾಲಿಕೆಗಳನ್ನು ಪ್ರತಿನಿಧಿಸುವ ಒಬ್ಬರು ಸಿಟಿ ಮುನ್ಸಿಪಲ್ ಕೌನ್ಸಿಲ್‌ಗಳನ್ನು ಪ್ರತಿನಿಧಿಸುವ ಒಬ್ಬರು ಅಥವಾ ಪಟ್ಟಣ ಪಂಚಾಯತ್‌ಗಳನ್ನು ಪ್ರತಿನಿಧಿಸುವ ಒಬ್ಬರು ಮತ್ತು ಪಟ್ಟಣ ಮುನ್ಸಿಪಾಲಿಟಿಗಳನ್ನು ಪ್ರತಿನಿಧಿಸುವ ಒಬ್ಬರು:<br>ಪರಂತು ಎಂಟರಲ್ಲಿ ಕನಿಷ್ಠ ಒಬ್ಬರು ಮಹಿಳೆಯಾಗಿರತಕ್ಕದ್ದು. ಅನುಸೂಚಿತ ಜಾತಿಗಳಿಂದ ಒಬ್ಬರು ಪ್ರತಿನಿಧಿ ಅನುಸೂಚಿತ ಪಂಗಡಗಳಿಂದ ಒಬ್ಬರು ಪ್ರತಿನಿಧಿ, ಅಲ್ಪಸಂಖ್ಯಾತರ ಸಮುದಾಯವು ಒಳಗೊಂಡಂತೆ ಇತರ ಹಿಂದುಳಿದ ವರ್ಗಗಳ ಒಬ್ಬರು ಪ್ರತಿನಿಧಿ. |

| | | |
|---|---|---|
| | | (ಇ) ತಜ್ಞರಾಗಿರುವ ಕೃಷಿ ಮತ್ತು ಸಂಬಂಧಿತ ಚಟುವಟಿಕೆಗಳ, ಕೈಗಾರಿಕೆ, ಗ್ರಾಮೀಣ ಮತ್ತು ನಗರಾಭಿವೃದ್ಧಿ, ಲಿಂಗ ಸಂಬಂಧಿ ವಿಷಯಗಳು (ಮಹಿಳೆಯಾಗಿರತಕ್ಕದ್ದು) ಮಕ್ಕಳ ಹಕ್ಕುಗಳು– ಮಕ್ಕಳ ಹಕ್ಕುಗಳ ಕಾರ್ಯಕರ್ತರು, ಆರ್ಥಿಕ, ಪಟ್ಟಣ ಮತ್ತು ಗ್ರಾಮ ಯೋಜನೆ ಮತ್ತು ಪರಿಸರ ಮತ್ತು ಜಲ ಸಂರಕ್ಷಣೆ ಈ ಕ್ಷೇತ್ರಗಳಿಂದ ಸರ್ಕಾರವು ನಾಮ ನಿರ್ದೇಶನ ಮಾಡಿದ ಐವರು ವ್ಯಕ್ತಿಗಳು. |
| 4 | ಸದಸ್ಯ ಕಾರ್ಯದರ್ಶಿ | ಯೋಜನಾ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಸರ್ಕಾರದ ಕಾರ್ಯದರ್ಶಿ. |

(3) ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ(2)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಸರ್ಕಾರೇತರ ಸದಸ್ಯರ ಪದಾವಧಿಯು ಐದು ವರ್ಷಗಳಿಗೆ ಅಥವಾ ತಮ್ಮ ಪದಾವಧಿ ಮುಕ್ತಾಯದವರೆಗೆ, ಅವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಗಿರತಕ್ಕದ್ದು.

(4) ಕರ್ನಾಟಕ ರಾಜ್ಯ ವಿಕೇಂದ್ರಿರಣ ಯೋಜನೆ ಮತ್ತು ಅಭಿವೃದ್ಧಿ ಸಮಿತಿಯ ಪ್ರಕಾರ್ಯಗಳು ಈ ಮುಂದಿನಂತೆ ಇರತಕ್ಕದ್ದು, ಎಂದರೆ;

(ಎ) ಕರ್ನಾಟಕ ರಾಜ್ಯ ವಿಕೇಂದ್ರಿಕರಣ ಯೋಜನೆ ಮತ್ತು ಅಭಿವೃದ್ಧಿ ಸಮಿತಿಯ(ಕೆಎಸ್‌ಡಿಪಿಡಿಸಿ) ಜಿಲ್ಲೆಯ ಯೋಜನೆಗಳು ಮತ್ತು ಇತರ ಯೋಜನಾ ಘಟಕಗಳ ನಡುವೆ ಪರಸ್ಪರ ಸಮಾಲೋಚನೆ ಮತ್ತು ವ್ಯವಹಾರಗಳನ್ನು ಕಲ್ಪಿಸುವುದಕ್ಕೆ ಅವುಗಳನ್ನು ಜೋಡಿಸತಕ್ಕದ್ದು ಮತ್ತು ನಗರ ಮತ್ತು ಗ್ರಾಮೀಣ ಯೋಜನೆಗಳ ವಲಯ ಮತ್ತು ಸ್ಥಳ ವಿಸ್ತಾರ ವಿಷಯಗಳನ್ನು ಸಂಯೋಜಿಸುವುದಕ್ಕೆ ಚೌಕಟ್ಟನ್ನು ಕೂಡಾ ಕಲ್ಪಿಸತಕ್ಕದ್ದು.

(ಬಿ) ಕೆಎಸ್‌ಡಿಪಿಡಿಸಿಯ ಕ್ರೋಢೀಕರಣ ಮತ್ತು ಸಂಯೋಜನೆಯ ಪ್ರಕ್ರಿಯೆಯು ಜಿಲ್ಲೆಗಳು ಸಿದ್ದಪಡಿಸಿದುದನ್ನು ವ್ಯತ್ಯಾಸಗೊಳಿಸತಕ್ಕದ್ದಲ್ಲ.

(ಸಿ) ಸಮಿತಿಯು ಕ್ರೋಢೀಕರಣ ಯೋಜನೆಯನ್ನು ಸಿದ್ದಪಡಿಸುವಾಗ, ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂತೆ ಅಂಥ ಸಂಸ್ಥೆಗಳು ಮತ್ತು ಸಂಘಗಳೊಂದಿಗೆ ಸಮಾಲೋಚನೆ ಮಾಡತಕ್ಕದ್ದು.

(ಡಿ) ಕೇಂದ್ರೀಕರಣ ಮತ್ತು ಸಮಾಲೋಚನೆಯ ಪ್ರಕ್ರಿಯೆಯು ಪೂರ್ಣವಾದ ತರುವಾಯ ಕೂಡಲೇ ಸಮಿತಿಯು ಸರ್ಕಾರಕ್ಕೆ ಕ್ರೋಢೀಕೃತ ಯೋಜನೆಯನ್ನು ಕಳುಹಿಸತಕ್ಕದ್ದು.

(ಇ) ಸಮಿತಿಯು, ಸ್ಥಳೀಯ ಅಭಿವೃದ್ಧಿ ಮತ್ತು ಪ್ರಾದೇಶಿಕ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯಸೂತ್ರವನ್ನೂ ಸಹ ನೋಡಿಕೊಳ್ಳತಕ್ಕದ್ದು, ಜಿಲ್ಲೆಗಳ ಮತ್ತು ರಾಜ್ಯ ಯೋಜನೆಗಳ ಸಮನ್ವಯ ಮತ್ತು ಸ್ಥಳೀಯ ಸಂಸ್ಥೆಗಳನ್ನು ಬಲಗೊಳಿಸಲು ಕಾರ್ಯನೀತಿಗಳನ್ನು ರೂಪಿಸುವುದು

**77. XIX ನೇ ಅಧ್ಯಾಯ ಮತ್ತು ಅದರ ಶೀರ್ಷಿಕೆಯ ಸೇರ್ಪಡೆ.**–ಮೂಲ ಅಧಿನಿಯಮದ 310ಬಿ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"ಅಧ್ಯಾಯ XIX**

**ನಿಯಮಗಳು, ವಿನಿಮಯಗಳು ಮತ್ತು ಉಪವಿಧಿಗಳು"**

**78. 315ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 315ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"315. ಉಪವಿಧಿಗಳನ್ನು ಮಾಡಲು ಗ್ರಾಮ ಪಂಚಾಯತ್‌ನ ಅಧಿಕಾರ.– (1)** ಈ ಅಧಿನಿಯಮದ ಉಪಬಂಧಗಳು ಮತ್ತು 311ನೇ ಪ್ರಕರಣದ ಅಡಿಯಲ್ಲಿನ ನಿಯಮಗಳು ಮತ್ತು 313ನೇ ಪ್ರಕರಣದ ಅಡಿಯಲ್ಲಿನ ವಿನಿಮಯಗಳು ಮತ್ತು ಜಿಲ್ಲಾ ಪಂಚಾಯತ್‌ನ ಪೂರ್ವ ಮಂಜೂರಾತಿಯೊಂದಿಗೆ ಉಪವಿಧಿಗಳನ್ನು ವ್ಯತ್ಯಾಸಗೊಳಿಸಬಹುದು ಅಥವಾ ರದ್ದುಮಾಡತಕ್ಕದ್ದು ಅಥವಾ ಉಪವಿಧಿಗಳನ್ನು ರಚಿಸತಕ್ಕದ್ದು.

(ಎ) ಮಾರುಕಟ್ಟೆಗಳು, ಸರಕುಗಳನ್ನು ಮಾರಾಟ ಮಾಡಲು ಬಳಸುವ ಎಲ್ಲಾ ಸಾರ್ವಜನಿಕ ಸಂಸ್ಥೆಗಳು ಮತ್ತು ಕಸಾಯಿಖಾನೆಗಳು ಮತ್ತು ಮಾರಾಟಕ್ಕಾಗಿ ಅಥವಾ ಬಾಡಿಗೆಗಾಗಿ ಇರುವ ಪ್ರಾಣಿಗಳಿಗಾಗಿ ಅಥವಾ ಪ್ರಾಣಿಗಳು ಬಳಸುವ ಅಥವಾ ಅವುಗಳ ಉತ್ಪನ್ನಗಳ ಮಾರಾಟಕ್ಕಾಗಿ ಎಲ್ಲಾ ಸ್ಥಳಗಳು ಮತ್ತು ಅದರಲ್ಲಿ ಕ್ರಮಬದ್ಧ ಮತ್ತು ಸ್ವಚ್ಛ ವ್ಯವಹಾರ ನಿರ್ವಹಣೆಯನ್ನು ನಿಯಂತ್ರಿಸುವುದು ಮತ್ತು ಪರಿಶೀಲಿಸುವುದು, ಗ್ರಾಮ ಪಂಚಾಯತ್ ಮಾರುಕಟ್ಟೆಗಳು ಅಥವಾ ಇತರ ನಿರ್ದಿಷ್ಟಪಡಿಸಿದ ಸ್ಥಳಗಳಲ್ಲಿ ಹಣ್ಣುಗಳು, ಹೂಗಳು ಮತ್ತು ತರಕಾರಿಗಳು ಅಥವಾ ಮಾಂಸ, ಮೀನು, ಮೊಟ್ಟೆಗಳು ಮತ್ತು ಪ್ರಾಣಿಗಳ ಮಾರಾಟವನ್ನು ನಿಯಂತ್ರಿಸುವುದು ಮತ್ತು ಗ್ರಾಮ ಪಂಚಾಯಿತಿಗೆ ಸೇರಿದ ಅವುಗಳಲ್ಲಿ ಯಾವುದನ್ನಾದರೂ ಬಳಸುವುದಕ್ಕೆ ವಿಧಿಸಬೇಕಾದ ಬಾಡಿಗೆಗಳು ಮತ್ತು ಇತರ ಚಾರ್ಜುಗಳನ್ನು ನಿಗದಿಪಡಿಸುವುದು;

(ಬಿ) ಗ್ರಾಮ ಪಂಚಾಯಿತಿಗೆ ಸೇರದ ಯಾವುದೇ ಸ್ಥಳದ ಉಪಯೋಗಕ್ಕಾಗಿ, ಷರತ್ತುಗಳನ್ನು ನಿರ್ದಿಷ್ಟಪಡಿಸುವ ಅಥವಾ ಸನ್ನಿವೇಶಗಳಿಗೆ ಮತ್ತು ಪ್ರದೇಶಗಳಿಗೆ ಒಳಪಟ್ಟು ಅಥವಾ ಸ್ಥಳಿಯ ಪ್ರದೇಶಗಳ ಲೈಸೆನ್ಸನ್ನು ಮಂಜೂರು ಮಾಡಬಹುದು, ತಿರಸ್ಕರಿಸಬಹುದು, ಅಮಾನತ್ತುಗೊಳಿಸಬಹುದು ಅಥವಾ ಹಿಂತೆಗೆದುಕೊಳ್ಳಬಹುದು;

(ಸಿ) ಕುದುರೆಗಳು, ಜಾನುವಾರುಗಳು ಅಥವಾ ಇತರ ಚತುಷ್ಪಾದ ಪ್ರಾಣಿಗಳನ್ನು ಸಾಕುವುದಕ್ಕೆ ಮತ್ತು ಇಟ್ಟುಕೊಳ್ಳುವುದಕ್ಕೆ ಅಥವಾ ಕೋಳಿ ಸಾಕಾಣೆ/ಪಕ್ಷಿಗಳ ಸಾಗಾಣಿಕೆ, ಮಾರಾಟ ಅಥವಾ ಬಾಡಿಗೆ ಅಥವಾ ಅದರ ಉತ್ಪನ್ನದ ಮಾರಾಟವನ್ನು ನಿಯಂತ್ರಿಸುವುದು;

(ಡಿ) ಸಾರ್ವಜನಿಕ ಆರೋಗ್ಯಕ್ಕೆ ಅಪಾಯವನ್ನುಂಟುಮಾಡುವುದನ್ನು ತಡೆಗಟ್ಟಲು ಅವಶ್ಯವೆನಿಸಬಹುದಾದಂತೆ, ಕುದುರೆಗಳು, ಒಂಟೆಗಳು, ಜಾನುವಾರುಗಳು, ಕತ್ತೆಗಳು, ಹಂದಿಗಳು, ಮೇಕೆ ಮತ್ತು ಕುರಿಗಳನ್ನು ಅವುಗಳ ಸಂಖ್ಯೆಗೆ ಸಂಬಂಧದಲ್ಲಿ, ಅಂಥ ಉಪವಿಧಗಳಲ್ಲಿ ನಿಯಮಿಸಬಹುದಾದ ಅಂಥ ನಿಬಂಧನೆಗಳಿಗೆ ಅನುಸಾರವಾಗಿ ಅನ್ಯಥಾ ಮತ್ತು ಉದ್ದೇಶಕ್ಕಾಗಿ ಬಳಸಬೇಕಾದ ಸ್ಥಳಗಳಲ್ಲಿ ಇಟ್ಟುಕೊಳ್ಳುವುದು ಅಥವಾ ಮಂದೆಯಲ್ಲಿರುಸುವುದು ನಿಷೇದಿಸುವುದು;

(ಇ) ಗ್ರಾಮ ಪಂಚಾಯಿತಿ ಪ್ರದೇಶದೊಳಗೆ ಬಯಲು ಬಹಿರ್ದೆಸೆಯಿಂದ ಮುಕ್ತವಾದ ಸ್ವಚ್ಛತೆಯನ್ನು ಪಡೆಯುವುದು ಮತ್ತು ನೈರ್ಮಲೀಕರಣ ಮತ್ತು ಘನ ಮತ್ತು ದ್ರವ ತ್ಯಾಜ್ಯದ ನಿರ್ವಹಣೆ;

(ಎಫ್) ಜನನ ಮತ್ತು ಮರಣಗಳ ನೋಂದಣಿ ಮತ್ತು ಗ್ರಾಮ ಪಂಚಾಯತ್ ಪ್ರದೇಶದೊಳಗೆ ಅಂಕಿಅಂಶಗಳನ್ನು ತೆಗೆದುಕೊಳ್ಳುವುದು ಮತ್ತು ಅಂಥ ನೋಂದಣಿ ಅಥವಾ ಪರಿಣಾಮಕಾರಿ ಅಂಕಿ ಅಂಶಗಳನ್ನು ಮಾಡಲು ಅವಶ್ಯವೆನಿಸಬಹುದಾದ ಅಂಥ ಮಾಹಿತಿಯನ್ನು ಒದಗಿಸುವಂತೆ ಒತ್ತಾಯಪಡಿಸುವುದು;

(ಜಿ) ಸತ್ತ ಪ್ರಾಣಿಗಳ ವಿಲೇವಾರಿಯನ್ನು ನಿಯಂತ್ರಿಸುವುದು, ಸತ್ತ ಪ್ರಾಣಿಗಳ ವಿಲೇಗಾಗಿ ಅಂಥ ಸ್ಥಳಗಳ ಬಳಕೆಗೆ ಅರ್ಹವಾದ ಸಮುದಾಯದ ಅಥವಾ ಸಮುದಾಯದ ವರ್ಗದ ಧಾರ್ಮಿಕ ಬಳಕೆಯ ಸ್ಥಳಗಳಿಗೆ ಮುಕ್ತ ಗೌರವವನ್ನು ನೀಡಿ, ಸತ್ತ ಪ್ರಾಣಿಗಳನ್ನು ಉತ್ತಮವಾಗಿ ಮತ್ತು ಕ್ಷೇಮ ನಿರ್ಮಲ ಪರಿಸ್ಥಿತಿಯಲ್ಲಿ ವಿಲೇ ಮಾಡುವುದಕ್ಕಾಗಿ ಎಲ್ಲಾ ಸ್ಥಳಗಳ ನಿರ್ವಹಣೆ ಮಾಡುವುದು

(ಎಚ್) ಅಪಾಯಕಾರಿ ರೋಗದ ಯಾವುದೇ ಪ್ರಕರಣಗಳ ಬಗ್ಗೆ ಮಾಹಿತಿಯನ್ನು ಒದಗಿಸುವುದನ್ನು ಒತ್ತಾಯಪಡಿಸುವುದು;

(ಐ) ಗ್ರಾಮ ಪಂಚಾಯತ್ ನಿವಾಸಿಗಳು, ಅಂಥ ಮಾಹಿತಿಯಲ್ಲಿ ವಿಧಿಸಲಾದ ಯಾವುದೇ ತೆರಿಗೆಗೆ ತಮಗೆ ಸಂಬಂಧಿಸಿದ ಹೊಣೆಗಾರಿಕೆಗಳನ್ನು ಖಚಿತ ಪಡಿಸಿಕೊಳ್ಳಲು ಅವಶ್ಯವಾಗಬಹುದಾದ ಅಂಥ ಮಾಹಿತಿಗಳನ್ನು ಒದಗಿಸುವಂತೆ ಒತ್ತಾಯಪಡಿಸುವುದು;

(ಜೆ) ಗ್ರಾಮ ಪಂಚಾಯತ್ ಪ್ರದೇಶದ ಮಿತಿಗೊಳಗಾಗಲಿ ಅಥವಾ ಹೊರಗಾಗಲಿ ನೀರಿನ ಹಂಚಿಕೆಗಾಗಿ ಗ್ರಾಮ ಪಂಚಾಯಿತಿಯು ಒಡೆತನ ಹೊಂದಿರುವ ನೀರು ಸರಬರಾಜು ಮೂಲಗಳನ್ನು ಮತ್ತು ಸಾಧನಗಳಿಗೆ ಹಾಗೂ ಪರಿಕರಿಗಳನ್ನು ಸಂರಕ್ಷಿಸುವುದು ಮತ್ತು ಅವುಗಳಿಗೆ ಆಗುವ ಹಾನಿಯನ್ನು ತಡೆಗಟ್ಟುವುದು; ಹಾಗೂ ನೀರು ಸರಬರಾಜು ಮತ್ತು ಬಳಕೆಗೆ ಸಂಬಂಧಿಸಿದ ಎಲ್ಲಾ ವಿಷಯಗಳು ಮತ್ತು ನೀರನ್ನು ಬಿಡುವುದು ಅಥವಾ ನಿಲ್ಲಿಸುವುದನ್ನು ನಿಯಂತ್ರಿಸುವುದು ಮತ್ತು ನೀರು ಪೋಲಾಗುವುದನ್ನು ತಡೆಗಟ್ಟುವುದು, ಗ್ರಾಮ ಪಂಚಾಯತ್ ನೀರು ಕಾಮಗಾರಿಗಳು ಮತ್ತು ಅದರೊಂದಿಗಿನ ಪೈಪುಗಳು ಮತ್ತು ಫಿಟ್ಟಿಂಗ್‌ಗಳು ಗ್ರಾಮ ಪಂಚಾಯಿತಿಗೆ ಸೇರಿದ ಅಥವಾ ಸೇರಿಲ್ಲದ ಸ್ವತ್ತಿನ ನಿರ್ವಹಣೆ ಮತ್ತು ನಿಯಂತ್ರಣ ಮಾಡುವುದು;

**<u>ವಿವರಣೆ:–</u>** ಈ ಖಂಡದ ಉದ್ದೇಶಕ್ಕಾಗಿ "ನೀರು ಸರಬರಾಜಿನ ಮೂಲಗಳು ಮತ್ತು ಸಾಧನಗಳು" ಸಾರ್ವಜನಿಕರು ಬಳಸುವ ಖಾಸಗಿ ಬಾವಿಗಳನ್ನು ಒಳಗೊಳ್ಳುತ್ತದೆ.

(ಕೆ) ನಿವಾಸಿ ಆವರಣಗಳನ್ನು ಅದಿಭೋಗಿಸುವ ವ್ಯಕ್ತಿಗಳಿಗೆ ಶುದ್ಧ ನೀರಿನ ಸಾಕಷ್ಟು ಸರಬರಾಜನ್ನು ಪಡೆದುಕೊಳ್ಳುವುದು;

(ಎಲ್) ಗ್ರಾಮ ಪಂಚಾಯತ್ ಮಿತಿಗಳೊಳಗೆ ಸಾರ್ವಜನಿಕ ಸ್ನಾನ ಮತ್ತು ತೊಳೆಯುವ ಸ್ಥಳಗಳ ಬಳಕೆಯನ್ನು ನಿಯಂತ್ರಿಸುವುದು;

(ಎಂ) ಸತ್ತ ಪ್ರಾಣಿಗಳ ಮೃತದೇಹಗಳ ವಿಲೆಯನ್ನು ನಿಯಂತ್ರಿಸುವುದು;

(ಎನ್) ಸಾರ್ವಜನಿಕ ಬೀದಿಗಳಲ್ಲಿ ತಾತ್ಕಾಲಿಕ ಅದಿಭೋಗಕ್ಕಾಗಿ ತಾತ್ಕಾಲಿಕ ಕಟ್ಟಡಗಳ ನಿರ್ಮಾಣ ಅಥವಾ ಸಾರ್ವಜನಿಕ ಬೀದಿಗಳಲ್ಲಿ ನಿರ್ಮಿತಿಗಳಿಗೆ ಯಾವ ಷರತ್ತುಗಳಿಗೆ ಒಳಪಟ್ಟು ಅನುಮತಿ ನೀಡಲಾಗುವುದೊ ಅದನ್ನು ನಿಯಮಿಸುವುದು;

(ಒ) ಸ್ಥಿರತೆಯನ್ನು ಕಾಪಾಡಿಕೊಳ್ಳಲು ಮತ್ತು ಬೆಂಕಿಯನ್ನು ತಡೆಗಟ್ಟುವ ಉದ್ದೇಶಕ್ಕಾಗಿ ಮತ್ತು ಆರೋಗ್ಯದ ಉದ್ದೇಶಗಳಿಗಾಗಿ ಹೊಸ ಕಟ್ಟಡಗಳ ಪ್ಲಿಂತ್‌ಗಳು, ಗೋಡೆಗಳು, ತಳಪಾಯಗಳು, ಮಹಡಿಗಳು, ಮೇಲ್ಚಾವಣಿಗಳು ಮತ್ತು ಚಿಮಣಿಗಳ ರಚನೆ ಮತ್ತು ಆಯಾಮಗಳನ್ನು ನಿಯಂತ್ರಿಸುವುದು;

(ಪಿ) ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1963ಕ್ಕೆ ಒಳಪಟ್ಟು ಖಾಸಗಿ ಅಥವಾ ವಾಣಿಜ್ಯ ಕಟ್ಟಡಗಳ ನಿರ್ಮಾಣ, ಬಳಕೆಯನ್ನು ನಿಯಂತ್ರಿಸುವುದು;

(ಕ್ಯೂ) ಈ ಅಧಿನಿಯಮದಲ್ಲಿ ನಿರ್ದಿಷ್ಟವಾಗಿ ಉಪಬಂಧಿಸಿರದ, ಗ್ರಾಮಪಂಚಾಯಿತಿಯ ಸ್ವತ್ತಾಗಿರಲಿ ಅಥವಾ ಆಗಿರದ ಚರಂಡಿಗಳು, ಒಳಚರಂಡಿಗಳು, ವಾಯುಸಂಚಾರ ಸುರಂಗಮಾರ್ಗಗಳ, ಸಗಣಿ ಮತ್ತು ಗೊಬ್ಬರದ ಗುಂಡಿಗಳು, ರೊಚ್ಚು ಗುಂಡಿಗಳು, ನೀರು ಶೌಚಾಲಯಗಳು, ಕಕ್ಕಸ್ಸುಗಳು, ಲೆಟ್ರಿನ್‌ಗಳು, ಮೂತ್ರಾಲಯಗಳ ಮತ್ತು ಪ್ರತೀ ವಿವರಣಾತ್ಮಕ ಒಳಚರಂಡಿ ಅಥವಾ ಒಳಚರಂಡಿ ಕಾಮಗಾರಿಗಳ ನಿರ್ಮಾಣ, ನಿರ್ವಹಣೆ ಮತ್ತು ನಿಯಂತ್ರಿಸುವುದು ;

(ಆರ್) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆಗಳ ಅಧಿನಿಯಮ, 1963ರ ಅನುಸಾರವಾಗಿ ಹೊಸ ವಿಸ್ತರಣೆಗಳ ಅಥವಾ ಲೇಔಟ್‌ಗಳು ಅಥವಾ ಹೊಸ ಖಾಸಗಿ ಬೀದಿಗಳ ರಚನೆಗಳನ್ನು ಮಾಡಲು ಗ್ರಾಮ ಪಂಚಾಯತ್ ಅಗತ್ಯಪಡಿಸಿದ ಮಾಹಿತಿ ಮತ್ತು ಯೋಜನೆಗಳನ್ನು ನಿರ್ಧರಿಸುವುದು;

(ಎಸ್) ಕರ್ನಾಟಕ ಸಂಚಾರ ನಿಯಂತ್ರಣ ಅಧಿನಿಯಮ, 1960 ಉಪಬಂಧಗಳಿಗೆ ಒಳಪಟ್ಟು ಅಂತಹ ಬೀದಿಗಳ ಎರಡು ಕಡೆಗಳಲ್ಲಿ ಅಥವಾ ಅಂತಹ ಬೀದಿಯ ಭಾಗದಲ್ಲಿ ಪೋಸ್ಟ್‌ಗಳನ್ನು ನೆಡುವ ಮೂಲಕ ಸಾರ್ವಜನಿಕರಿಗೆ ಆಗುವ ಅಪಾಯ, ತೊಂದರೆ ಅಥವಾ ಅನಾನುಕೂಲತೆಯನ್ನು ತಡೆಗಟ್ಟುವುದಕ್ಕಾಗಿ ಯಾವುದೇ ನಿರ್ಧಿಷ್ಟ ಬೀದಿಯಲ್ಲಿ ವಾಹನಗಳ ಸಂಚಾರವನ್ನು ತಡೆಗಟ್ಟುವುದು ಅಂಥ ನಮೂನೆ ನಿರ್ಮಾಣ ತೂಕ ಮತ್ತು ಅಳತೆಯ ಯಾವುದೇ ವಾಹನಗಳ ಅಥವಾ ಕೆಲವು ಸಮಯದಲ್ಲಿ ಅಂಥ ಷರತ್ತುಗಳ

ಅಡಿಯಲ್ಲಿ ಹೊರತುಪಡಿಸಿ ರಸ್ತೆ ಮಾರ್ಗ ಅಥವಾ ಅದರ ಯಾವುದೇ ನಿರ್ಮಿತಿಗೆ ಹಾನಿ ಉಂಟುಮಾಡುವಂತ ಭಾವಿಸಬಹುದಾದ ಅಂತಹ ಯಂತ್ರೋಪಕರಣ ಅಥವಾ ಇತರ ನಿರ್ವಹಿಸಲಾಗದ ಅಂತರದಿಂದ ತುಂಬಲಾಗಿರುವ ಸಾಗಣೆಯನ್ನು ನಿಯಂತ್ರಿಸುವುದು ಟ್ರ್ಯಾಕ್ಷನ್ ಅಥವಾ ಲೋಕೋಮೇಷನ್ ಇದನ್ನು ರಸ್ತೆ ಮಾರ್ಗದ ರಕ್ಷಣೆಗಾಗಿ ವಸ್ತುಗಳ ಬಳಕೆ ದೀಪಗಳ ಸಂಖ್ಯೆ ಮತ್ತು ನಿಯಮಿಸಬಹುದಾದ ನೆರವುಗಳು ಮತ್ತು ಇತರ ಸಾಮಾನ್ಯ ಮುನ್ನೆಚ್ಚರಿಕೆಗಳು ಅಂಥ ಉಪವಿಧಿಗಳಲ್ಲಿ ಸಾಮಾನ್ಯವಾಗಿ ಅಥವಾ ಪ್ರತಿಯೊಂದು ಪ್ರಕರಣದಲ್ಲಿ ಮಂಜೂರಾಗಬೇಕಾದ ವಿಶೇಷ ಲೈಸನ್ಸಗಳಲ್ಲಿ ಸಮಯದಲ್ಲಿ ಅಂತಹ ನಿಬಂಧನೆಗಳು ಅಂತಹ ಉಪವಿಧಿಗಳಲ್ಲಿ ನಿಯಮಿಸಬಹುದಾದ ಶುಲ್ಕಗಳ ಅನ್ವಯ ಮತ್ತು ಪಾವತಿ:

ಪರಂತು ಅಂಥ ನಿಷೇಧದ ನೋಟೀಸುಗಳನ್ನು ಗ್ರಾಮ ಪಂಚಾಯಿತಿಯು ಅಂಥ ರಸ್ತೆಯ ಅಥವಾ ರಸ್ತೆಯ ಭಾಗದ ಎರಡೂ ಕೊನೆಗಳಲ್ಲಿ ಅಥವಾ ಹತ್ತಿರ ಎದ್ದು ಕಾಣುವ ಸ್ಥಳಗಳಲ್ಲಿ ಪ್ರಕಟಿಸದ ಹೊರತು ಯಾವುದೇ ನಿರ್ದಿಷ್ಟ ರಸ್ತೆ ಅಥವಾ ರಸ್ತೆಯ ಭಾಗಕ್ಕೆ ಮಾತ್ರ ಜಾರಿಯಲ್ಲಿರುವ ಅಂಥ ಉಪವಿಧಿಗೆ ಸಂಬಂಧಿಸಿದೆಯೆಂದು ಭಾವಿಸತಕ್ಕದ್ದಲ್ಲ.

(ಟಿ) ಹಾನಿ ಅಥವಾ ದುರುಪಯೋಗದಿಂದ ಗ್ರಾಮ ಪಂಚಾಯಿತಿಯಲ್ಲಿ ಅಥವಾ ನಿಯಂತ್ರಣದ ಅಡಿಯಲ್ಲಿ ನಿಹಿತವಾಗಿರುವ ಸಾರ್ವಜನಿಕ ಉದ್ಯಾನಗಳು, ಗಾರ್ಡನುಗಳು, ಕಣಗಳು ಮತ್ತು ಮುಕ್ತ ಪ್ರದೇಶಗಳ ರಕ್ಷಣೆಯನ್ನು ಭದ್ರಗೊಳಿಸುವುದು ಅವುಗಳ ನಿರ್ವಹಣೆಯನ್ನು ಮತ್ತು ಸಾರ್ವಜನಿಕರು ಅವುಗಳನ್ನು ಬಳಸುವ ವಿಧಾನಗಳನ್ನು ನಿರ್ವಹಿಸುವುದು, ಹಾಗೂ ಅವುಗಳಲ್ಲಿರುವ ವ್ಯಕ್ತಿಗಳ ಸೂಕ್ತ ವರ್ತನೆಯನ್ನು ಉಪಬಂಧಿಸುವುದು.

(ಯು) ಸರ್ವೇಯರುಗಳ ಅಥವಾ ಅಗತ್ಯವಿರುವ ಪ್ಲಾನುಗಳನ್ನು ರಚಿಸುವ ವ್ಯಕ್ತಿಗಳು ಅಥವಾ ಪ್ಲಂಬರುಗಳ ವಿದ್ಯಾರ್ಹತೆಗಳನ್ನು ನಿಗದಿಪಡಿಸುವುದು ಸರ್ವೇಯರುಗಳ ಅಥವಾ ಪ್ಲಂಬರುಗಳ ಅಥವಾ ನೀರು ಸರಬರಾಜು ಗುತ್ತಿಗೆದಾರರಾಗಿ ವ್ಯಕ್ತಿಗಳಿಗೆ ಲೈಸೆನ್ಸುಗಳನ್ನು ನೀಡುವುದು ಮತ್ತು ಅಂಥ ಲೈಸೆನ್ಸುಗಳಿಗೆ ವಿಧಿಸಬಹುದಾದ ಶುಲ್ಕಗಳನ್ನು ನಿಗದಿಪಡಿಸುವುದು ಹಾಗೂ ಅಂಥ ಲೈಸೆನ್ಸುಗಳನ್ನು ತೆಗೆದುಹಾಕುವ ಅಥವಾ ಉಪಬಂಧಗಳನ್ನು ಮಾರ್ಪಡಿಸುವುದಕ್ಕಾಗಿ ಮತ್ತು ಲೈಸೆನ್ಸು ಪಡೆದ ಪ್ಲಂಬರುಗಳ ಅಥವಾ ನೀರು ಸರಬರಾಜು ಗುತ್ತಿಗೆದಾರರ ಹೊರತಾಗಿ ನೀರು ಅಥವಾ ಕಾಲುವೆ ಕೊಳವೆಗಳ ಅಥವಾ ಮನೆ ಸಂಪರ್ಕಗಳಿಗೆ ಕೈಗೊಳ್ಳಲಾದ ಅಥವಾ ಮಾಡಿರುವ ಯಾವುದೇ ಮಾರ್ಪಡುಗಳು ಅಥವಾ ಕೈಗೊಳ್ಳಲಾದ ಅಥವಾ ಮಾಡಿರುವ ಯಾವುದೇ ಮಾರ್ಪಡುಗಳು ಅಥವಾ ರಿಪೇರಿಗಳು ಅಥವಾ ಜೋಡಣೆಗಳನ್ನು ನಿರ್ಬಂಧಿಸುವುದು ಎಲ್ಲಾ ಲೈಸೆನ್ಸ ಪಡೆದ ಪ್ಲಂಬರುಗಳ ಅಥವಾ ಲೈಸೆನ್ಸ ಪಡೆದ ನೀರು ಸರಬರಾಜು ಗುತ್ತಿಗೆದಾರರ ಮೇಲೆ ಸಾಕಷ್ಟು ನಿಯಂತ್ರಣ ಚಲಾಯಿಸಲು ಉಪಬಂಧಗಳನ್ನು ಕಲ್ಪಿಸುವುದು, ಅವರುಗಳ ಕೈಗೊಂಡ ಕೆಲಸಗಳನ್ನು ಪರಿವೀಕ್ಷಿಸುವುದು ಮತ್ತು ಲೈಸೆನ್ಸ ಪಡೆದ ಪ್ಲಂಬರು ಅಥವಾ ಲೈಸೆನ್ಸ್ ಪಡೆದ ನೀರು ಸರಬರಾಜು ಗುತ್ತಿಗೆದಾರನ ಮೂಲಕ ಮಾಡಲಾದ ಕೆಲಸದ ಗುಣಮಟ್ಟ, ಬಳಸುವ ವಸ್ತು, ಕೆಲಸಗಳನ್ನು ಕಾರ್ಯಗತಗೊಳಿಸುವಲ್ಲಿ ವಿಳಂಬ ಮತ್ತು ವಿಧಿಸಲಾದ ಶುಲ್ಕಗಳಿಗೆ ಸಂಬಂಧಿಸಿದಂತೆ ವ್ಯಾಪ್ತಿಯಲ್ಲಿರುವ ಮಾಲೀಕರು ಅಥವಾ ಅನುಭೋಗದಾರರು ಮಾಡಿರುವ ದೂರುಗಳ ಕೇಳುವುದು ಮತ್ತು ವಿಲೇ ಮಾಡುವುದು.

(ವಿ) ಯಾವುದೇ ಪ್ರಮೇಯಗಳಲ್ಲಿ ಯಾವುದೇ ಕಾರ್ಖಾನೆಗಳಲ್ಲಿ ಕಾರ್ಖಾನೆಗಳ ಅಧಿನಿಯಮ 1948ರಲ್ಲಿ ಪರಿಭಾಷಿಸಿದಂತೆ ಲೈಸೆನ್ಸುಗಳನ್ನು ಮಂಜೂರು ಮಾಡಬಹುದಾದ, ತಿರಸ್ಕರಿಸಬಹುದಾದ, ಅಮಾನತುಪಡಿಸಬಹುದಾದ, ಅಥವಾ ಹಿಂಪಡೆಯಬಹುದಾದ ಷರತ್ತುಗಳ ಮೇರೆಗೆ ಅಥವಾ ಒಳಪಟ್ಟು ಮತ್ತು ಸಂದರ್ಭಗಳು ಹಾಗೂ ಸಂಬಂಧಿಸಿದ ಪ್ರದೇಶಗಳ ಅಥವಾ ಸ್ಥಳಗಳನ್ನು ನಿಯಮಿಸುವುದು.

(ಡಬ್ಲ್ಯೂ) ಯಾವುದೇ ಭೂಮಿಯ, ಕಟ್ಟಡ ಅಥವಾ ರಚನೆಯ ಮೇಲೆ ಅಥವಾ ಯಾವುದೇ ವಾಹನದ ಮೇಲೆ ಅಥವಾ ಯಾವುದೇ ಇತರ ವಿಧಾನದಲ್ಲಿ ಪ್ರದರ್ಶಿಸುವುದಕ್ಕಾಗಿ ಯಾವುದೇ ಜಾಹೀರಾತುಗಳನ್ನು ನಿಲ್ಲಿಸಲು, ಪ್ರದರ್ಶಿಸಲು, ನಿಗದಿಪಡಿಸಲು ಅಥವಾ ಉಳಿಸಿಕೊಳ್ಳಲು ಮಂಜೂರು ಮಾಡಬಹುದಾದ, ತಿರಸ್ಕರಿಸಬಹುದಾದ ಅಮಾನತ್ತು ಪಡಿಸಬಹುದಾದ ಅಥವಾ ಹಿಂಪಡೆಯಬಹುದಾದ ಅನುಮತಿಯನ್ನು ಷರತ್ತುಗಳ ಮೇಲೆ ಅಥವಾ ಒಳಪಟ್ಟು ನಿಯಮಿಸುವುದು.

(ಎಕ್ಸ್) ಗ್ರಾಮ ಪಂಚಾಯಿತಿ ಮೂಲಕ ಮಂಜೂರಾದ ಲೈಸೆನ್ಸುಗಳು ಅಥವಾ ಅನುಮತಿಗಳಿಗಾಗಿ ಅಥವಾ ದಾಖಲೆಗಳ ಪರಿವೀಕ್ಷಣೆಗಾಗಿ ಅಥವಾ ದಸ್ತಾವೇಜುಗಳ ಪ್ರತಿಗಳ ಮಂಜೂರಾತಿಗಾಗಿ ಅಥವಾ ಲೈಸೆನ್ಸುಗಳನ್ನು ಅಥವಾ ಪರ್ಮಿಟ್ಟುಗಳಿಗೆ ಶುಲ್ಕಗಳನ್ನು ವಿಧಿಸುವುದು; ಮತ್ತು

(ವೈ) ಗ್ರಾಮ ಪಂಚಾಯತ್ ಆಡಳಿತಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳು ಸಾಮಾನ್ಯ ನಿರ್ವಹಣೆಗೆ.

(2) ಈ ಪ್ರಕರಣದ ಅಡಿಯಲ್ಲಿ ಯಾವುದೇ ಉಪವಿಧಿಯನ್ನು ಮಾಡುವುದಕ್ಕೆ ಮೊದಲು ಪ್ರತಿಯೊಂದು ಗ್ರಾಮ ಪಂಚಾಯತಿಯು, ಅದರಿಂದ ಬಾಧಿತವಾಗಬಹುದಾದ ವ್ಯಕ್ತಿಗಳ ಮಾಹಿತಿಗಾಗಿ ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಪ್ರಕಟಿಸುವುದು, ಉದ್ದೇಶಿತ ಉಪವಿಧಿಯ ಕರಡು ಪ್ರತಿಯ ಜೊತೆಗೆ ಕರಡನ್ನು ಪರಿಗಣನೆಗೆ ತೆಗೆದುಕೊಳ್ಳುವ ದಿನಾಂಕದ ಅಥವಾ ಅದರ ತರುವಾಯ ನಿರ್ದಿಷ್ಟಪಡಿಸಿದ ನೋಟೀಸಿನೊಂದಿಗೆ ಉದ್ದೇಶಿತ ಉಪವಿಧಿಯ ಕರಡು ಪ್ರಕಟಣೆಯ ದಿನಾಂಕದಿಂದ 30 ದಿನಗಳಿಗೆ ಮುಂಚಿತವಲ್ಲದ ಅಂಥ ದಿನಾಂಕದಿಂದ, ಉಪ ವಿಧಿಯನ್ನು ಮಾಡುವ ಮೊದಲು ಹಾಗೇ ನಿರ್ದಿಷ್ಟಪಡಿಸಿದ ದಿನಾಂಕಕ್ಕೆ ಮುನ್ನ ಯಾವೊಬ್ಬ ವ್ಯಕ್ತಿಯೂ ಲಿಖಿತದಲ್ಲಿ ಕರಡು ಪ್ರತಿಗೆ ಸಂಬಂಧಿಸಿದಂತೆ ಮಾಡಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ಸ್ವೀಕರಿಸತಕ್ಕದ್ದು ಮತ್ತು ಪರಿಗಣಿಸತಕ್ಕದ್ದು.

**315ಎ. ಗ್ರಾಮ ಪಂಚಾಯತಿಯ ಉಪ ವಿಧಿಗಳನ್ನು ರದ್ದುಪಡಿಸುವ ಅಥವಾ ಮಾರ್ಪಡಿಸುವ ಸರ್ಕಾರದ ಅಧಿಕಾರ.–** (1) ಸರ್ಕಾರವು ಯಾವುದೇ ಗ್ರಾಮ ಪಂಚಾಯತಿಯ ಮೂಲಕ ಮಾಡಲಾದ ಯಾವುದೇ ಉಪವಿಧಿಯನ್ನು ಅಥವಾ ಅದರ ಭಾಗವನ್ನು ಪೂರ್ಣವಾಗಿ ಯಾವುದೇ ಸಮಯದಲ್ಲಿ ಅಧಿಸೂಚನೆಯ ಮೂಲಕ ನಿರಸನಗೊಳಿಸಬಹುದು:

ಪರಂತು ಈ ಉಪಪ್ರಕರಣದ ಅಡಿಯಲ್ಲಿ ಯಾವುದೇ ಕ್ರಮವನ್ನು ತೆಗೆದುಕೊಳ್ಳುವ ಮೊದಲು ಸರ್ಕಾರವು ಉದ್ದೇಶಿತ ಅಧಿಸೂಚನೆಯ ಕರಡನ್ನು ಪ್ರಕಟಿಸತಕ್ಕದ್ದು ಮತ್ತು ಅದನ್ನು ಸಂಬಂಧಿತ ಗ್ರಾಮ ಪಂಚಾಯತಿಗೆ ತಿಳಿಸತಕ್ಕದ್ದು, ಪ್ರಸಾವನೆಗೆ ಪ್ರತಿಯಾಗಿ ಕಾರಣ ಕೇಳುವುದಕ್ಕೆ ಗ್ರಾಮ ಪಂಚಾಯತ್ ಮತ್ತು ಸಾರ್ವಜನಿಕ ಸದಸ್ಯರುಗಳಿಗಾಗಿ ಯುಕ್ತ ಅವಧಿಯನ್ನು ನಿಗದಿಪಡಿಸುವುದು ಹಾಗೂ ಗ್ರಾಮ ಪಂಚಾಯತ್ ಮತ್ತು ಸಾರ್ವಜನಿಕ ಸದಸ್ಯರುಗಳ ಯಾವುದೇ ವಿವರಣೆ ಮತ್ತು ಆಕ್ಷೇಪಣೆಗಳು ಇದ್ದಲ್ಲಿ ಪರಿಗಣಿಸುವುದು.

(2) ಯಾವುದೇ ಉಪವಿಧಿಯ ನಿರಸನಗೊಳಿಸುವಿಕೆ ಅಥವಾ ಮಾರ್ಪಾಡು ಅಧಿಕೃತ ರಾಜ್ಯ ಪತ್ರದಲ್ಲಿ ಅಧಿಸೂಚಿಸಿದ ದಿನಾಂಕದಿಂದ ಜಾರಿಯಾಗತಕ್ಕದ್ದು. ಅದರಲ್ಲಿ ದಿನಾಂಕವನ್ನು ನಿರ್ಧಿಷ್ಟಪಡಿಸದಿದ್ದಲ್ಲಿ ಪ್ರಕಟಣೆಯ ದಿನಾಂಕದಿಂದ ಮತ್ತು ಅಂಥ ದಿನಾಂಕದ ಮೊದಲು ಯಾವುದನ್ನೇ ಮಾಡಿರುವುದು, ತೆಗೆದುಹಾಕಿರುವುದು ಅಥವಾ ಅನುಭವಿಸಿರುವುದು ಬಾಧಿತವಾಗತಕ್ಕದ್ದಲ್ಲ."

**79. I II, III ಮತ್ತು IV ನೇ ಅನುಸೂಚಿಗಳ ಪ್ರತಿಯೋಜನೆ.–** ಮೂಲ ಅಧಿನಿಯಮದ I II, III ಮತ್ತು IV ನೇ ಅನುಸೂಚಿಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**ಅನುಸೂಚಿ –I**

**(58ನೇ ಪ್ರಕರಣವನ್ನು ನೋಡಿ)**

**ಸಾಮಾನ್ಯ**

ಈ ಅನುಸೂಚಿಯಲ್ಲಿ ನಿರೂಪಿಸಿರುವ ವಿಷಯಗಳಿಗೆ ಸಂಬಂಧಪಟ್ಟಂತೆ ಮತ್ತು ಗ್ರಾಮಪಂಚಾಯತಿಯ ಬಳಿ ಖರ್ಚು ಮಾಡುವುದಕ್ಕೆ ಲಭ್ಯವಿರುವ ಗ್ರಾಮ ಪಂಚಾಯತಿ ನಿಧಿಗಳಿಗೆ ಸಂಬಂಧಿಸಿರುವಷ್ಟರ ಮಟ್ಟಿಗೆ ಮತ್ತು ಗ್ರಾಮ ಪಂಚಾಯತಿಗಳಿಗೆ ಸಂಬಂಧಪಟ್ಟಂತೆ ರೂಪಿಸಿರುವ ಜವಾಬ್ದಾರಿ ನಕ್ಷೆಯಲ್ಲಿ ವಿವರಿಸಿರುವಂತೆ ಸಹ ಗ್ರಾಮಪಂಚಾಯತಿ ಪ್ರದೇಶದ ಅಗತ್ಯತೆಗಳನ್ನು ಈಡೇರಿಸುವುದು ಗ್ರಾಮಪಂಚಾಯತ್‌ಗಳ ಕರ್ತವ್ಯವಾಗಿರತಕ್ಕದ್ದು.

ಈ ಅಧಿನಿಯಮದ ಇತರೆ ಉಪಬಂಧಗಳಿಗೆ ಮತ್ತು ಮಾರ್ಗಸೂಚಿಗಳಿಗೆ ಹಾಗೂ ಸರ್ಕಾರದ ಹಣಕಾಸು, ತಾಂತ್ರಿಕ ಅಥವಾ ಇತರ ನೆರವಿಗೆ ಒಳಪಟ್ಟು, ಗ್ರಾಮ ಪಂಚಾಯತಿಯು ಅಭಿವೃದ್ಧಿಗಾಗಿ ಮತ್ತು ಸಾಮಾಜಿಕ ನ್ಯಾಯಯ ಉದ್ದೇಶಗಳಿಗಾಗಿ ಅನುಸೂಚಿಯಲ್ಲಿ ನಿರೂಪಿಸಿರುವ ವಿಷಯಗಳನ್ನು ನಿರ್ವಹಿಸಲು ಹಾಗೂ ಅವುಗಳಿಗೆ ಸಂಬಂಧಿಸಿದ ಸ್ಕೀಮುಗಳನ್ನು ಸಿದ್ಧಪಡಿಸಲು ಮತ್ತು ಅನುಷ್ಠಾನಗೊಳಿಸಲು ಅಧಿಕಾರ ಹೊಂದಿರತಕ್ಕದ್ದು.

**1. ಸಾಮಾನ್ಯ ಪ್ರಕಾರ್ಯಗಳು;**

(i) ಪಂಚಾಯತಿ ಪ್ರದೇಶದ ಅಭಿವೃದ್ಧಿಗಾಗಿ ವಾರ್ಷಿಕ ಯೋಜನೆಗಳನ್ನು ಸಿದ್ಧಪಡಿಸುವುದು.

(ii) ವಾರ್ಷಿಕ ಬಜೆಟ್ ಸಿದ್ಧಪಡಿಸುವುದು.

(iii) ಪ್ರಕೃತಿ ವಿಕೋಪಗಳಿಗೆ ಪರಿಹಾರವನ್ನು ಒದಗಿಸುವುದು.

(iv) ಸಾರ್ವಜನಿಕ ಸ್ವತ್ತುಗಳಲ್ಲಿನ ಅತಿಕ್ರಮಣವನ್ನು ತೊಡೆದುಹಾಕುವುದು.

(v) ಸ್ವಯಂ ಸೇವೆಯನ್ನು ಸಂಘಟಿಸುವುದು ಮತ್ತು ಸಮುದಾಯ ಕಾರ್ಯಗಳಿಗಾಗಿ ವಂತಿಗೆ ನೀಡುವುದು.

(vi) ಗ್ರಾಮಗಳ ಅತ್ಯಾವಶ್ಯಕ ಅಂಕಿ ಅಂಶಗಳನ್ನು ಇಟ್ಟುಕೊಳ್ಳುವುದು.

**2. ಕೃಷಿ, ತೋಟಗಾರಿಕೆ ಮತ್ತು ರೇಷ್ಮೆ ಕೃಷಿ**

(i) ಸಮಗ್ರ ಯೋಜನೆಯನ್ನು ತಯಾರಿಸಿ, ಕೃಷಿ, ತೋಟಗಾರಿಕೆ ಮತ್ತು ತರಕಾರಿ ಉತ್ಪಾದನೆಯನ್ನು ಹೆಚ್ಚಿಸುವುದಕ್ಕಾಗಿ ಗ್ರಾಮ ಸಭೆಯೊಂದಿಗೆ ಸಮಾಲೋಚಿಸಿ, ಸಮಗ್ರ ಗ್ರಾಮ ಕೃಷಿ, ತೋಟಗಾರಿಕೆ ಮತ್ತು ರೇಷ್ಮೆ ಕೃಷಿ ಯೋಜನೆಯನ್ನು ಸಿದ್ಧಪಡಿಸುವುದು ಹಾಗೂ ಅವುಗಳ ಕಾರ್ಯಚಟುವಟಿಕೆಗಳ ಮೇಲ್ವಿಚಾರಣೆ ಮಾಡುವುದು;

(ii) ಇತರ ಬಂಜರು ಭೂಮಿಯೂ ಸೇರಿದಂತೆ, ಕೃಷಿ ತೋಟಗಾರಿಕೆ ಮತ್ತು ರೇಷ್ಮೆ ಮೇವು ಭೂಮಿಯ (grazing) ಗರಿಷ್ಠ ಬಳಕೆಯನ್ನು ಖಚಿತಪಡಿಸಲು ಕೃಷಿ ತೋಟಗಾರಿಕೆ ಮತ್ತು ರೇಷ್ಮೆ ಮೇವು ಭೂಮಿಯ (grazing) ಗಳ ಬಂಜರು ಭೂಮಿಗಳ ಯೋಜನೆಗಳನ್ನು ಸಿದ್ಧಪಡಿಸುವುದು ಮತ್ತು ಅಭಿವೃದ್ಧಿಪಡಿಸುವುದು.

(iii) ಗ್ರಾಮ ಪಂಚಾಯತ್ ನಿಧಿಗಳಿಂದ, ನರ್ಸರಿಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು.

(iv) ಕೃಷಿ ಯಾಂತ್ರೀಕರಣಕ್ಕೆ ಸಂಬಂಧಿಸಿದಂತೆ ಯೋಜನೆಯನ್ನು ಸಿದ್ಧಪಡಿಸುವುದು, ಶಿಫಾರಸ್ಸು ಮಾಡುವುದು ಹಾಗೂ ಮೇಲ್ವಿಚಾರಣೆ ಮಾಡುವುದು.

(v) ಸಮೂಹ ಕೃಷಿ ಸಹಕಾರ ಸಂಘಗಳನ್ನು ಸ್ಥಾಪಿಸಿಕೊಳ್ಳುವುದಕ್ಕೆ ಅನುಕೂಲ ಕಲ್ಪಿಸುವುದು.

(vi) ಮಣ್ಣು, ನೀರು ಮತ್ತು ಬೀಜ ಸಂರಕ್ಷಣೆಯ ಮೇಲ್ವಿಚಾರಣೆ ಮಾಡುವುದು.

(vii) ಜಲಾನಯನ ಪ್ರದೇಶದ ನಿರ್ವಹಣೆಯನ್ನು ಕುರಿತು ಮೇಲ್ವಿಚಾರಣೆ ಮಾಡುವುದು.

(viii) ಮಾರುಕಟ್ಟೆ ಧಾರಣೆಯನ್ನು ಪ್ರದರ್ಶಿಸುವುದು.

(ix) ಕೃಷಿ ವಿಮಾ ಯೋಜನೆಗಳ ಮೇಲ್ವಿಚಾರಣೆ ಮಾಡುವುದು ಮತ್ತು ಅವುಗಳನ್ನು ಅನುಷ್ಠಾನಗೊಳಿಸುವುದು.

**3. ಸಣ್ಣ ನೀರಾವರಿ**

(i) ಗ್ರಾಮ ಪಂಚಾಯತ್ ಪ್ರದೇಶದ ಒಳಗಿರುವ 0 – 10 ಹೆಕ್ಟೇರುಗಳವರೆಗಿನ ಅಚ್ಚುಕಟ್ಟು ಪ್ರದೇಶದಲ್ಲಿರುವ ಎಲ್ಲಾ ಸಣ್ಣ ನೀರಾವರಿ ಯೋಜನೆಗಳನ್ನು ಸಿದ್ಧಪಡಿಸುವುದು, ನಿರ್ಮಿಸುವುದು, ನವೀಕರಿಸುವುದು ಮತ್ತು ನಿರ್ವಹಿಸುವುದು.

(ii) ಗ್ರಾಮ ಪಂಚಾಯತ್ ಮಟ್ಟದಲ್ಲಿ ಇರುವ, 0 – 10 ಹೆಕ್ಟೇರುಗಳವರೆಗಿನ ಅಚ್ಚುಕಟ್ಟು ಪ್ರದೇಶದಲ್ಲಿರುವ ಅಂತಹ ಎಲ್ಲಾ ಸಣ್ಣ/ಕಿರು ನೀರಾವರಿ ಯೋಜನೆಗಳನ್ನು ಸಕಾಲಿಕವಾಗಿ ನಿರ್ವಹಿಸುವುದು ಮತ್ತು ಅನುಷ್ಠಾನಗೊಳಿಸುವುದು ಹಾಗೂ ಲಭ್ಯ ನೀರನ್ನು ಸಮನಾಗಿ ಹಂಚಿಕೆ ಮಾಡುವುದು ಮತ್ತು ಸಂಪೂರ್ಣವಾಗಿ ಬಳಸಿಕೊಳ್ಳುವುದು.

(iii) ಅಂತರ್ಜಲದ ಮರುಪೂರಣ ಮತ್ತು ಮಳೆ ನೀರು ಕೊಯ್ಲಿಗೆ ಸಂಬಂಧಿಸಿದ ಯೋಜನೆಯನ್ನು ಅಭಿವೃದ್ಧಿಪಡಿಸುವುದು ಮತ್ತು ಅನುಷ್ಠಾನಗೊಳಿಸುವುದು.

(iv) ಗ್ರಾಮಪಂಚಾಯತ್ ಪ್ರದೇಶದಲ್ಲಿ ಇರುವ ಎಲ್ಲಾ ನೀರಾವರಿ ಮೂಲಗಳ ನಕ್ಷೆ ರೂಪಿಸುವುದನ್ನು ಒಳಗೊಂಡಂತೆ ಅವುಗಳ ದಾಖಲೆಗಳನ್ನು ನಿರ್ವಹಿಸುವುದು.

**4. ಪಶುಸಂಗೋಪನೆ, ಹೈನುಗಾರಿಕೆ, ಕೋಳಿ ಸಾಕಾಣಿಕೆ ಮತ್ತು ಮೀನುಗಾರಿಕೆ**

(i) ಗ್ರಾಮ ಪಂಚಾಯತ್‌ಗೆ ವಹಿಸಿಕೊಟ್ಟಿರುವ ಹೈನುಗಾರಿಕೆ, ಕೋಳಿಸಾಕಾಣಿಕೆ, ಹಂದಿ ಸಾಕಾಣಿಕೆ ಮತ್ತು ಕುರಿ ಸಾಕಾಣಿಕೆ ಫಾರ್ಮ್‌ಗಳನ್ನು ಅಭಿವೃದ್ಧಿಪಡಿಸುವುದಕ್ಕೆ ಸಂಬಂಧಿಸಿದ ಯೋಜನೆಗಳನ್ನು ಅನುಷ್ಠಾನಗೊಳಿಸುವುದು.

(ii) ಗ್ರಾಮ ಪಂಚಾಯತ್‌ಗೆ ವಹಿಸಿಕೊಟ್ಟಿರುವ ಜಾನುವಾರು–ಅಭಿವೃದ್ಧಿ ಸ್ಕೀಮುಗಳನ್ನು ಅನುಷ್ಠಾನಗೊಳಿಸುವುದು.

(iii) ಸಾಂಕ್ರಾಮಿಕ ರೋಗಗಳ ಮತ್ತು ಅಂಟುರೋಗಗಳ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳುವುದು.

(iv) ಗ್ರಾಮ ಪಂಚಾಯತ್‌ಗಳ ಅಧೀನದಲ್ಲಿ ಬರುವ ನೀರಾವರಿ ಕಾಮಗಾರಿಗಳಲ್ಲಿ ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸುವುದಕ್ಕೆ ಸಂಬಂಧಿಸಿದ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವುದು.

(v) ಗ್ರಾಮೀಣ ಮೀನು ಮತ್ತು ಮಾಂಸದ ಮಾರುಕಟ್ಟೆಗಳನ್ನು ಸ್ಥಾಪಿಸುವುದು ಹಾಗೂ ನಿರ್ವಹಿಸುವುದು.

(vi) ಹುಲ್ಲುಗಾವಲು (grass land) ಮೇವು ಅಭಿವೃದ್ಧಿಪಡಿಸುವುದು.

**5. ಸಾಮಾಜಿಕ ಅರಣ್ಯ**

(i) ಬಂಜರು ಭೂಮಿಯ ಅರಣ್ಯೀಕರಣ

(ii) ಸಾಮಾಜಿಕ ಅರಣ್ಯ, ಕೃಷಿ ಅರಣ್ಯಗಳನ್ನು (farm forestry) ಅಭಿವೃದ್ಧಿಪಡಿಸುವುದು, ಸಾಮಾಜಿಕ ಅರಣ್ಯದ ಉತ್ಪನ್ನಗಳ ಮಾರಾಟ ಸಂಸ್ಥೆಯನ್ನು ಸ್ಥಾಪಿಸುವುದು, ನಿರ್ವಹಿಸುವುದು ಮತ್ತು ಅವುಗಳನ್ನು ವಿಲೆ ಮಾಡುವುದು.

(iii) ದನಗಳ ಮೇವಿಗೆ, ಉರುವಲಿಗೆ ಬೇಕಾಗುವ ಮರಗಳನ್ನು ಬೆಳೆಸುವುದು ಮತ್ತು ಹಣ್ಣಿನ ಮರಗಳನ್ನು ಬೆಳೆಸುವುದು.

(iv) ಕೃಷಿ ಅರಣ್ಯ ಸ್ಕೀಮನ್ನು ಜಾರಿಗೊಳಿಸುವುದು.

(v) ನರ್ಸರಿಗಳನ್ನು ಸ್ಥಾಪಿಸುವುದು ಮತ್ತು ಅವುಗಳನ್ನು ನಿರ್ವಹಿಸುವುದು.

(vi) ಮೀಸಲು ಅರಣ್ಯ, ಸಂರಕ್ಷಿತ ಅರಣ್ಯ, ಮತ್ತು ವನ್ಯ ಜೀವಿಗಳ ಸಂರಕ್ಷಿತ ಪ್ರದೇಶದಲ್ಲಿರುವ ಅರಣ್ಯ ಉತ್ಪನ್ನಗಳ ಹೊರತುಪಡಿಸಿ ಸಣ್ಣ ಅರಣ್ಯ ಪ್ರದೇಶಗಳ ಉತ್ಪನ್ನಗಳನ್ನು ನಿರ್ವಹಿಸುವುದು.

(vii) ಸಾಮಾಜಿಕ ಅರಣ್ಯ ನಿರ್ಮಾಣ ಮತ್ತು ಕೃಷಿ ಅರಣ್ಯ ನಿರ್ಮಾಣ ಬೆಳೆಸಲು ಯೋಜನೆ (ಪ್ರಾಜೆಕ್ಟ್)ಗಳನ್ನು ರೂಪಿಸುವುದು ಮತ್ತು ಅವುಗಳನ್ನು ಅನುಷ್ಠಾನಗೊಳಿಸುವುದು.

(viii) ಗ್ರಾಮ ಪಂಚಾಯತಿಯ ನಿಯಂತ್ರಣದಲ್ಲಿರುವ ರಸ್ತೆಯ ಬದಿಯಲ್ಲಿ ಮತ್ತು ಇತರ ಸಾರ್ವಜನಿಕ ಸ್ಥಳಗಳಲ್ಲಿ ಮರಗಳನ್ನು ನೆಡುವುದು ಮತ್ತು ಅವುಗಳನ್ನು ಸಂರಕ್ಷಿಸುವುದು.

**6. ಪ್ರವಾಸೋದ್ಯಮ**

(i) ಗ್ರಾಮ ಪಂಚಾಯತ್ ಪ್ರದೇಶದಲ್ಲಿ ಪ್ರವಾಸಿ ತಾಣಗಳನ್ನು ಗುರುತಿಸುವುದು ಮತ್ತು ಅವುಗಳನ್ನು ಅಭಿವೃದ್ಧಿಪಡಿಸುವುದಕ್ಕೆ ಸಂಬಂಧಿಸಿದಂತೆ ಪ್ರಸ್ತಾವಗಳನ್ನು ಸಲ್ಲಿಸುವುದು.

(ii) ಪ್ರವಾಸೋದ್ಯಮದ ಚಟುವಟಿಕೆಗಳಿಗೆ ಅನುಕೂಲ ಕಲ್ಪಿಸಿಕೊಡುವುದು.

(iii) ಗ್ರಾಮ ಪಂಚಾಯತ್‌ಗಳಿಗೆ ವಹಿಸಿಕೊಟ್ಟಿರುವ ಪ್ರವಾಸಿ ಕೇಂದ್ರಗಳಲ್ಲಿ ಮೂಲ ಸೌಕರ್ಯಗಳನ್ನು ಒದಗಿಸುವುದು ಮತ್ತು ಅವುಗಳನ್ನು ನಿರ್ವಹಿಸುವುದು

(iv) ಭಾರತ ಪುರಾತನ ಸರ್ವೇಕ್ಷಣಾ ಇಲಾಖೆ ಅಥವಾ ಇತರ ಸ್ಥಳೀಯ ಪ್ರಾಧಿಕಾರಗಳು ಅಥವಾ ಸರ್ಕಾರಿ ಇಲಾಖೆಗಳು ನಿರ್ವಹಿಸುತ್ತಿರುವ ಪ್ರವಾಸಿ ತಾಣಗಳನ್ನು ಹೊರತುಪಡಿಸಿ ಇನ್ನಿತರ ಪ್ರವಾಸಿ ತಾಣಗಳಲ್ಲಿ ಪ್ರವೇಶ ಶುಲ್ಕವನ್ನು ಮತ್ತು ವಾಹನ ನಿಲುಗಡೆ ಶುಲ್ಕಗಳನ್ನು ಸಂಗ್ರಹಿಸುವುದು.

**7. ಸಣ್ಣ ಪ್ರಮಾಣದ ಕೈಗಾರಿಕೆಗಳು ಮತ್ತು ಗ್ರಾಮೀಣ ಕೈಗಾರಿಕೆಗಳು – ಖಾದಿ, ಕರಕುಶಲ ಕಲೆಗಳು, ಗ್ರಾಮೋದ್ಯೋಗಗಳು, ಹಾಗೂ ಆಹಾರ ಸಂಸ್ಕರಣಾ ಕೈಗಾರಿಕೆಗಳು**

(i) ಗುಡಿ ಕೈಗಾರಿಕೆಗಳಿಗೆ ಮತ್ತು ಖಾದಿ ಕೈಗಾರಿಕೆಗಳಿಗೆ, ಕರಕುಶಲ ಕಲೆಗಳಿಗೆ, ಗ್ರಾಮೋದ್ಯೋಗಗಳಿಗೆ, ಆಹಾರ ಸಂಸ್ಕರಣಾ ಕೈಗಾರಿಕೆಗಳಿಗೆ ಹಾಗೂ ಇತರ ಕೃಷಿಯೇತರ ಚಟುವಟಿಕೆಗಳಿಗೆ ಉತ್ತೇಜನ ನೀಡುವುದು.

(ii) ಪ್ರದರ್ಶನ, ಮಾರುಕಟ್ಟೆ ಸೌಲಭ್ಯವನ್ನು ವ್ಯವಸ್ಥೆಗೊಳಿಸುವುದು.

(iii) ಗುಡಿ ಕೈಗಾರಿಕೆಗಳಿಗೆ ಮತ್ತು ಖಾದಿ ಕೈಗಾರಿಕೆಗಳಿಗೆ, ಕರಕುಶಲ ಕಲೆಗಳಿಗೆ, ಗ್ರಾಮೋದ್ಯೋಗಗಳಿಗೆ, ಆಹಾರ ಸಂಸ್ಕರಣಾ ಕೈಗಾರಿಕೆಗಳಿಗೆ ರಾಜ್ಯ ಸಮಿತಿಗಳ ಮತ್ತು ಅಖಿಲ ಭಾರತ ಸಮಿತಿಗಳ ಸ್ಕೀಮುಗಳನ್ನು ರೂಪಿಸುವುದು ಮತ್ತು ಅವುಗಳನ್ನು ಅನುಷ್ಠಾನಗೊಳಿಸುವುದು.

(iv) ಲಭ್ಯವಿರಬಹುದಾದ ಖಚ್ಚಾ ಸಾಮಗ್ರಿಗಳು ಮತ್ತು ಮೌಲ್ಯವರ್ಧಿತ ಉತ್ಪನ್ನಗಳಿಗೆ ಸಂಬಂಧಿಸಿದ ಮಾಹಿತಿ ದತ್ತಾಂಶವನ್ನು ಸಂಗ್ರಹಿಸುವುದು.

(v) ಮಾರುಕಟ್ಟೆ ಸಮೀಕ್ಷೆ ನಡೆಸುವುದು ಮತ್ತು ಜನರಲ್ಲಿ ಮಾಹಿತಿ ಪ್ರಸಾರ ಮಾಡುವುದು.

(vi) ಆಹಾರ ಸಂಸ್ಕರಣೆ ಮತ್ತು ಉತ್ಪನ್ನ ಮಾರಾಟ ಚಟುವಟಿಕೆಗಳನ್ನು ಉತ್ತೇಜಿಸುವುದು.

**8. ಗ್ರಾಮೀಣ ವಸತಿ**

(i) ವಸತಿರಹಿತ ಮತ್ತು ನಿವೇಶನರಹಿತ ಜನರನ್ನು ಹಾಗೂ ವಲಸೆ ಕಾರ್ಮಿಕರನ್ನು ಗುರುತಿಸುವುದು.

(ii) ಮೀನುಗಾರರ ವಸತಿ ಸ್ಕೀಮುಗಳನ್ನು ಒಳಗೊಂಡಂತೆ ಎಲ್ಲಾ ಗ್ರಾಮೀಣ ವಸತಿ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಭಾಗವಹಿಸುವುದು.

(iii) ವಸತಿ ಮೇಲ್ದರ್ಜೀಕರಣ ಸ್ಕೀಮಿನ ಅನುಷ್ಠಾನದಲ್ಲಿ ಭಾಗವಹಿಸುವುದು.

(iv) ಋತುಮಾನದ ವಲಸೆ ಕಾರ್ಮಿಕರಿಗೆ ಋತುಮಾನದ ವಲಸೆ ಸೌಲಭ್ಯಗಳನ್ನು ಅನುಷ್ಠಾನಗೊಳಿಸುವುದು.

(v) ಗ್ರಾಮೀಣ ವಸತಿ ಸಹಕಾರ ಸಂಘಗಳಿಗೆ ಉತ್ತೇಜನ ನೀಡುವುದು.

(vi) ಸರ್ಕಾರಿ ಭೂಮಿಯನ್ನು ಗುರುತಿಸುವುದು ಮತ್ತು ಬಡಾವಣೆಗಳ ಅಭಿವೃದ್ಧಿಗಾಗಿ, ವಸತಿ ರಹಿತರಿಗೆ ವಸತಿ ನಿವೇಶನಗಳನ್ನು ವಿತರಿಸುವುದಕ್ಕೆ ಸಂಬಂಧಿಸಿದಂತೆ ನಿವೇಶನ ಹಂಚಿಕೆಗಾಗಿ ಅಥವಾ ನಿವೇಶನ ಮೀಸಲಾತಿಗಾಗಿ ಜಿಲ್ಲಾಧಿಕಾರಿಗೆ ಶಿಫಾರಸ್ಸು ಮಾಡುವುದು.

(vii) ಸರ್ಕಾರವು ನೀಡಿದ ಅಧಿಕಾರಗಳ ಪ್ರಕಾರ ಗ್ರಾಮೀಣ ವಸತಿ ಮತ್ತು ಬಡಾವಣೆ ಯೋಜನೆಗಳನ್ನು ಮಂಜೂರು ಮಾಡುವುದು.

**9. ಕುಡಿಯುವ ನೀರಿನ ಪೂರೈಕೆ**

(i) ನೀರಿನ ಗುಣಮಟ್ಟ ಮತ್ತು ಅದರ ವ್ಯಾಪ್ತಿ ಕುರಿತು ಅಗತ್ಯ ದತ್ತಾಂಶ, ಮಾಹಿತಿ ಸಂಗ್ರಹಿಸುವುದು ಹಾಗೂ ಆ ಕುರಿತು ಯೋಜನೆ ಸಿದ್ಧಪಡಿಸುವುದು.

(ii) ಗ್ರಾಮಪಂಚಾಯತಿಗಳ ವ್ಯಾಪ್ತಿಯೊಳಗಿನ ನೀರು ಸರಬರಾಜು ಸ್ಕೀಮುಗಳನ್ನು ನಿರ್ವಹಿಸುವುದು ಮತ್ತು ಮೇಲ್ವಿಚಾರಣೆ ಮಾಡುವುದು.

(iii) ಜಲಮಾಲಿನ್ಯದ ನಿಯಂತ್ರಣ, ರಕ್ಷಣೆ ಮತ್ತು ತಡೆಗಟ್ಟುವಿಕೆ

(iv) ಸಾಂಪ್ರದಾಯಿಕ ಕುಡಿಯುವ ಜಲಮೂಲಗಳ ನಿರ್ವಹಣೆ

(v) ಪರೀಕ್ಷೆಗಾಗಿ ಕುಡಿಯುವ ನೀರಿನ ಮೂಲಗಳಿಂದ ನೀರಿನ ಮಾದರಿಯ ಸಂಗ್ರಹಣೆ

(vi) ಕುಡಿಯುವ ನೀರಿನ ಮೂಲಗಳ ನಿಯತಕಾಲಿಕ ಶುದ್ಧೀಕರಣ

(vii) ಬಳಕೆದಾರರ ಶುಲ್ಕಗಳನ್ನು ಸಂಗ್ರಹಿಸುವ ಮೂಲಕ ಮನೆಗಳಿಗೆ ಮತ್ತು ವಾಣಿಜ್ಯ ಸಂಸ್ಥೆಗಳಿಗೆ ನಲ್ಲಿ ನೀರನ್ನು ಒದಗಿಸುವುದು

(viii) ನೀರು ಶುದ್ಧೀಕರಣ ಘಟಕಗಳ ಸ್ಥಾಪನೆ ಮತ್ತು ನಿರ್ವಹಣೆ

(ix) ಅಂತರ್ಜಲ ದುರ್ಬಳಕೆಯ ನಿಯಂತ್ರಣಕ್ಕೆ ಪ್ರಾಧಿಕಾರಗಳಿಗೆ ನೆರವು ನೀಡುವುದು.

**10. ಪಟ್ಟಣ ಮತ್ತು ಗ್ರಾಮಾಂತರ ಯೋಜನೆಗಳು ಮತ್ತು ಲೋಕೋಪಯೋಗಿ ಕಾಮಗಾರಿಗಳು (ರಸ್ತೆಗಳು, ಸೇತುವೆಗಳು ಹಾಯ್ಗಡಗಳು, ಜಲಮಾರ್ಗಗಳು ಮತ್ತು ಇತರ ಸಂಪರ್ಕ ಕಲ್ಪಿಸುವ ಮಾರ್ಗಗಳು)**

(i) ಈ ಕೆಳಗಿನ ನಿರ್ಮಿತಿಗಳಿಗಾಗಿ ಯೋಜನೆ ರೂಪಿಸುವುದು, ಅವುಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು:

(ಎ) ಪಾದಚಾರಿ ಮಾರ್ಗಗಳು/ಓಣಿಗಳು

(ಬಿ) ಗ್ರಾಮ ರಸ್ತೆಗಳು

(ಸಿ) ಸೇತುವೆಗಳು, ಮೋರಿಗಳು,

(ಡಿ) ಕಟ್ಟಡಗಳು

(ಇ) ಚರಂಡಿಗಳು

(ಎಫ್) ರಾಷ್ಟ್ರೀಯ ಹೆದ್ದಾರಿಗಳು, ರಾಜ್ಯ ಹೆದ್ದಾರಿಗಳು ಮತ್ತು ಎಂಡಿಆರ್‌ಗಳನ್ನು ಅಥವಾ ಇತರ ಸ್ಥಳೀಯ ಸಂಸ್ಥೆಗಳಿಗೆ ಅಥವಾ ಸರ್ಕಾರಿ ಇಲಾಖೆಗಳಿಗೆ ವಹಿಸಿಕೊಟ್ಟಂಥ ನಿರ್ಮಿತಿಗಳನ್ನು ಹೊರುತುಪಡಿಸಿ ಇತರ ನಿರ್ಮಿತಿಗಳು.

(ii) ಈ ಕೆಳಗಿನವುಗಳನ್ನು ನಿರ್ಮಿಸುವುದು ಹಾಗೂ ನಿರ್ವಹಿಸುವುದು

ಎ. ಪ್ರಯಾಣಿಕರ ತಂಗುದಾಣಗಳು/ವಾಹನ ನಿಲುಗಡೆ ಸ್ಥಳಗಳು

ಬಿ. ಆಟದ ಮೈದಾನಗಳು

(iii) ಎಲ್ಲಾ ವಿಧದ ಸ್ಮಶಾನ ಭೂಮಿ/ಸಮಾಧಿ ಭೂಮಿಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು, ಗ್ರಾಮ ಪಂಚಾಯಿತಿ ಮಟ್ಟದಲ್ಲಿನ ಎಲ್ಲಾ ಸ್ಮಶಾನ ಭೂಮಿ/ಸಮಾಧಿ ಭೂಮಿಗಳ ಬಳಕೆಗಾಗಿ ನಿಯಮಗಳನ್ನು ಮತ್ತು ವಿನಿಮಯಗಳ್ನು ರಚಿಸುವುದು

(iv) ದೋಣಿಗಳು, ಹಾಯ್ಗಡಗಳು ಮತ್ತು ಜಲ ಮಾರ್ಗಗಳನ್ನು ನಿರ್ವಹಿಸುವುದು

(v) ಮಳೆ ನೀರು ಚರಂಡಿಗಳನ್ನು ನಿರ್ವಹಿಸುವುದು

(vi) ಸ್ನಾನ ಘಟ್ಟಗಳು, ಸಾರ್ವಜನಿಕ ಮಾರುಕಟ್ಟೆ ಮುಂತಾದವುಗಳಂಥಹ ಮೂಲಸೌಕರ್ಯಗಳನ್ನು/ಸೌಲಭ್ಯಗಳನ್ನು ಆಧರಿಸಿದ ಸಮುದಾಯ ಅವಶ್ಯಕತೆಗಳನ್ನು ಸ್ಥಾಪಿಸುವುದು.

(vii) ಜನವಸತಿ ಪ್ರದೇಶಗಳನ್ನು ಅಭಿವೃದ್ಧಿ ಪಡಿಸುವುದು.

(viii) ವಸತಿ ಬಡಾವಣೆಗಳನ್ನು ನಿರ್ಮಿಸುವುದು

(ix) ಗ್ರಾಮ ಪಂಚಾಯಿತಿಗಳಿಗೆ ವಹಿಸಿಕೊಟ್ಟಿರುವ ಶಾಲಾ ಕಟ್ಟಡಗಳು, ಆಸ್ಪತ್ರೆಗಳು ಮತ್ತು ಇತರ ಸಾರ್ವಜನಿಕ ಸಂಸ್ಥೆಗಳ ನಿರ್ಮಾಣಕ್ಕೆ ಯೋಜನೆ ಸಿದ್ಧಪಡಿಸುವುದು, ಅವುಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು.

(x) ಸಮಗ್ರ ಗ್ರಾಮ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸುವುದು.

**11. ಗ್ರಾಮೀಣ ವಿದ್ಯುದೀಕರಣ/ವಿದ್ಯುತ್ ಮತ್ತು ಇಂಧನ**

(i) ಸಾರ್ವಜನಿಕ ಬೀದಿಗಳು ಮತ್ತು ಸ್ಥಳಗಳಲ್ಲಿ ಬೀದಿ ದೀಪಗಳನ್ನು ಅಳವಡಿಸುವುದು ಮತ್ತು ನಿರ್ವಹಿಸುವುದು.

(ii) ಗ್ರಾಮ ಪಂಚಾಯಿತಿ ನಿಧಿಗಳಿಂದ ಛಾವಣಿ ಮೇಲಿನ ಸೌರ ತಟ್ಟೆ ಅಳವಡಿಕೆಯನ್ನು ಒಳಗೊಂಡಂತೆ ಸೌರವಿದ್ಯುತ್, ಜೈವಿಕ ಅನಿಲ, ಗಾಳಿಯಂತ್ರ, ಕಿರು ವಿದ್ಯುತ್ ಜಲ ಸ್ಥಾವರಗಳಂತಹ ಸಣ್ಣ ಸಾಂಪ್ರದಾಯಿಕ ಮತ್ತು ಅಸಂಪ್ರದಾಯಿಕ ಇಂಧನ ಘಟಕಗಳ ಕುರಿತು ಯೋಜನೆ ಸಿದ್ಧಪಡಿಸುವುದು, ಅವುಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಮತ್ತು ಅವುಗಳಿಗೆ ಉತ್ತೇಜನ ನೀಡುವುದು.

(iii) ಹೆಚ್ಚುವರಿ ಅಸಂಪ್ರದಾಯಿಕ ಇಂಧನ ಉತ್ಪತ್ತಿಯನ್ನು ಇತರರಿಗೆ ಮಾರಾಟ ಮಾಡುವುದು.

(iv) ಗ್ರಾಮ ಪಂಚಾಯಿತಿಗೆ ಸ್ವಯಂ ಸೇವೆ ಸಲ್ಲಿಸುವ ಮೂಲಕ ಗ್ರಾಮೀಣ ವಿದ್ಯುದೀಕರಣಕ್ಕೆ ನೆರವು ನೀಡುವುದು.

**12. ಬಡತನ ನಿರ್ಮೂಲನೆ**

(i) ಬಡ ಜನರನ್ನು ಗುರುತಿಸುವುದು ಮತ್ತು ಬಡತನ ನಿರ್ಮೂಲನೆ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದು.

(ii) ಎಲ್ಲಾ ಬಡತನ ನಿರ್ಮೂಲನ ಕಾರ್ಯಕ್ರಮಗಳ ಫಲಾನುಭವಿಗಳನ್ನು ಗುರುತಿಸುವುದು ಮತ್ತು ಆಯ್ಕೆ ಮಾಡುವುದು.

(iii) ಗ್ರಾಮ ಪಂಚಾಯಿತಿ ಮಟ್ಟದಲ್ಲಿನ ವಿವಿಧ ಕಾರ್ಯಕ್ರಮಗಳ ಅಡಿಯಲ್ಲಿ ಫಲಾನುಭವಿಗಳ ಆಯ್ಕೆಗಾಗಿ ಗ್ರಾಮ ಸಭೆಗೆ ಅನುಕೂಲ ಕಲ್ಪಿಸಿಕೊಡುವುದು.

(iv) ಬಡತನ ನಿರ್ಮೂಲನೆ ಕಾರ್ಯಕ್ರಮಗಳ ಪ್ರಯೋಜನಗಳನ್ನು ಕುರಿತು ಯೋಜಿಸುವುದು, ಅನುಷ್ಠಾನಗೊಳಿಸುವುದು, ಅವುಗಳ ಮೇಲ್ವಿಚಾರಣೆ ಮಾಡುವುದು ಮತ್ತು ವಿತರಿಸುವುದು.

(v) ಸ್ವ–ಉದ್ಯೋಗ ಕಾರ್ಯಕ್ರಮಗಳಿಗೆ ಮೂಲಸೌಕರ್ಯ ಸೌಲಭ್ಯಗಳನ್ನು ಕಲ್ಪಿಸುವುದು.

(vi) ಸ್ವ–ಸಹಾಯ ಗುಂಪುಗಳನ್ನು ಮತ್ತು ನೆರೆಹೊರೆ ಗುಂಪುಗಳನ್ನು ಸಂಘಟಿಸುವುದು ಮತ್ತು ಸಬಲೀಕರಣಗೊಳಿಸುವುದು.

(vii) ಬಡತನ ನಿರ್ಮೂಲನೆ ಅವಶ್ಯಕತೆಗಳನ್ನು ವಿಶ್ಲೇಷಿಸುವುದು.

(viii) ಸ್ವ–ಉದ್ಯೋಗ ಮತ್ತು ಮಜೂರಿ ಉದ್ಯೋಗ ಕಾರ್ಯಕ್ರಮಗಳ ಬಗ್ಗೆ ಯೋಜನೆ ಸಿದ್ಧಪಡಿಸುವುದು ಮತ್ತು ಅದನ್ನು ಅನುಷ್ಠಾನಗೊಳಿಸುವುದು.

(ix) ವಿವಿಧ ಸ್ಕೀಮುಗಳ ಅಡಿಯಲ್ಲಿ ಮೂಲಭೂತ ಕನಿಷ್ಠ ಅಗತ್ಯತೆಗಳನ್ನು ಒದಗಿಸುವುದು.

(x) ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ಮತ್ತು ಉದ್ಯೋಗ ಅವಕಾಶದ ಉತ್ತೇಜನ ಕುರಿತು ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವುದು

**13. ಸಾರ್ವಜನಿಕ ವಿತರಣಾ ವ್ಯವಸ್ಥೆ (ಪಿಡಿಎಸ್)**

(i) ಆಹಾರ ಧಾನ್ಯಗಳು ಮತ್ತು ಇತರ ದೈನಂದಿನ ಅವಶ್ಯಕತೆಗಳ ವಿತರಣೆಯನ್ನು ನಿರ್ವಹಿಸುವುದು.

(ii) ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಮೇಲ್ವಿಚಾರಣೆ ಮಾಡುವುದು ಮತ್ತು ಆ ಬಗ್ಗೆ ಅರಿವು ಮೂಡಿಸುವುದು.

(iii) ಗ್ರಾಮ ಪಂಚಾಯಿತಿ ನಿಧಿಗಳಿಂದ ಗೋದಾಮುಗಳನ್ನು ಮತ್ತು ಗ್ರಾಮೀಣ ದಾಸ್ತಾನು ಮಳಿಗೆಗಳನ್ನು ನಿರ್ಮಿಸುವುದು ಮತ್ತು ಅವುಗಳನ್ನು ನಿರ್ವಹಿಸುವುದು

**14. ವಿಪತ್ತು ನಿರ್ವಹಣೆ**

(i) ವಿಪತ್ತು ಪೀಡಿತ ಸ್ಥಳಗಳನ್ನು ಗುರುತಿಸಲು ಸಮೀಕ್ಷೆ ನಡೆಸುವುದಕ್ಕಾಗಿ;

(ii) ವಿಪತ್ತು ನಿರ್ವಹಣೆ ಸೌಲಭ್ಯಗಳನ್ನು ಸೃಜಿಸಲು ಮತ್ತು ನಿರ್ವಹಿಸಲು;

(iii) ವಿಪತ್ತು ನಿರ್ವಹಣೆಯಲ್ಲಿ ಸ್ಥಳೀಯ ಮತ್ತು ಹೊರಗಿನ ತಜ್ಞರನ್ನು ಗುರುತಿಸಲು;

(iv) ಗ್ರಾಮ ಪಂಚಾಯತಿಯ ಸ್ವಂತ ನಿಧಿಯಿಂದ ಮತ್ತು ಸರ್ಕಾರವು ಹೊರಡಿಸಿದ ಮಾರ್ಗಸೂಚಿಗಳ ಪ್ರಕಾರ ವಿಪತ್ತುಗಳಿಂದ ಸಂತ್ರಸ್ತರಾದ ವ್ಯಕ್ತಿಗಳಿಗೆ ಪರಿಹಾರ ಮತ್ತು ನಷ್ಟ ಪರಿಹಾರ ಒದಗಿಸಲು,
–ಸಂಬಂಧಪಟ್ಟ ಪ್ರಾಧಿಕಾರಗಳಿಗೆ ನೆರವು ನೀಡುವುದು

**15. ಶಿಕ್ಷಣ [ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಣ, ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣ, ವಯಸ್ಕರ ಹಾಗೂ ಅನೌಪಚಾರಿಕ ಶಿಕ್ಷಣ]**

(i) ಪಂಚಾಯತಿ ಮಟ್ಟದಲ್ಲಿ ಸಾಂಪ್ರದಾಯಿಕ ಮತ್ತು ಸಾಂಪ್ರದಾಯಿಕವಲ್ಲದ ಈ ಎರಡು ರೀತಿಯ ಶಿಕ್ಷಣ ನೀಡುವ ಕುರಿತು ಯೋಜನೆಯನ್ನು ರೂಪಿಸುವಲ್ಲಿ ಮತ್ತು ಮೇಲ್ವಿಚಾರಣೆ ಮಾಡುವಲ್ಲಿ ಪಾಲ್ಗೊಳ್ಳುವುದು.

(ii) ಲೋಯರ್ ಮತ್ತು ಅಪ್ಪರ್ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸುವುದಕ್ಕೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರಕ್ಕೆ ಪ್ರಸ್ತಾವನೆಗಳನ್ನು ಕಳುಹಿಸುವುದು ಮತ್ತು ಅವರಿಂದ ಮಂಜೂರಾತಿಗಳನ್ನು ಪಡೆದುಕೊಳ್ಳುವುದು.

(iii) ಸರ್ಕಾರಿ ಲೋಯರ್ ಮತ್ತು ಅಪ್ಪರ್ ಪ್ರಾಥಮಿಕ ಶಾಲೆಗಳ ಮೇಲುಸ್ತುವಾರಿ ನೋಡಿಕೊಳ್ಳುವುದು.

(iv) ಸರ್ಕಾರಿ ಲೋಯರ್ ಮತ್ತು ಅಪ್ಪರ್ ಪ್ರಾಥಮಿಕ ಶಾಲೆಗಳ ಕಟ್ಟಡಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು.

(v) ಮಕ್ಕಳ ವಿವರಗಳನ್ನು ಸಂಗ್ರಹಿಸುವುದು ಮತ್ತು ಇಂದೀಕರಿಸುವುದು.

(vi) ಸಾಕ್ಷರತಾ ಕಾರ್ಯಕ್ರಮಗಳು, ಅನೌಪಚಾರಿಕ ಮತ್ತು ಔಪಚಾರಿಕ ಶಿಕ್ಷಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು, ವಯಸ್ಕರ ಸಾಕ್ಷರತೆಗೆ ಉತ್ತೇಜನ ನೀಡುವುದು.

(vii) ಆಡಳಿತ ನಿರ್ವಹಣೆಯನ್ನು ಒಳಗೊಂಡಂತೆ ಗುಣಮಟ್ಟ ನಿಯಂತ್ರಣವನ್ನು ನಿರ್ವಹಿಸುವುದು ಮತ್ತು ಮೇಲ್ವಿಚಾರಣೆ ಮಾಡುವುದು.

(viii) ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಶಿಕ್ಷಣ ಚಟುವಟಿಕೆಗಳ ಸಮೀಕ್ಷೆ ಮಾಡುವುದು ಮತ್ತು ಮೌಲ್ಯಮಾಪನ ಮಾಡುವುದು.

(ix) ಹಿಂದುಳಿದ ವರ್ಗಗಳು ಮತ್ತು ಸಮೂಹಗಳಿಗೆ, ಬಾಲಕಿಯರಿಗೆ, ವಿಶೇಷವಾಗಿ ವಿಕಲಚೇತನರು ಮತ್ತು ಅಲ್ಪಸಂಖ್ಯಾತ ಸಮೂಹಗಳಿಗಾಗಿ ಉನ್ನತ ಪ್ರಾಥಮಿಕ ಹಂತದವರೆಗಿನ ಆಶ್ರಮ, ಶಾಲೆಗಳ/ವಿದ್ಯಾರ್ಥಿನಿಲಯ ಶಾಲೆಗಳ ಮೇಲ್ವಿಚಾರಣೆ ಮಾಡುವುದು.

(x) ಗ್ರಾಮೀಣ ಕುಶಲಕರ್ಮಿಗಳಿಗೆ ಉತ್ತೇಜನ ನೀಡುವುದು ಮತ್ತು ಅವರಿಗೆ ವೃತ್ತಿ ತರಬೇತಿಯನ್ನು ನೀಡುವುದು.

(xi) ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ಸಂಪೂರ್ಣ ದಾಖಲಾತಿ ಮತ್ತು ಹಾಜರಾತಿಯನ್ನು ಖಚಿತಪಡಿಸಿಕೊಳ್ಳುವುದು.

**16. ಗ್ರಂಥಾಲಯಗಳು**

ಗ್ರಾಮ ಪಂಚಾಯತಿ ಮಟ್ಟದ ಗ್ರಂಥಾಲಯಗಳನ್ನು ಮತ್ತು ವಾಚನಾಲಯಗಳನ್ನು ನಿರ್ವಹಿಸುವುದು ಮತ್ತು ಮೇಲ್ವಿಚಾರಣೆ ಮಾಡುವುದು.

**17.ಕ್ರೀಡೆಗಳು ಮತ್ತು ಸಾಂಸ್ಕೃತಿಕ ಚಟುವಟಿಕೆಗಳು**

(i) ಆಟದ ಮೈದಾನಗಳನ್ನು ಸ್ಥಾಪಿಸುವುದು ಹಾಗೂ ಅವುಗಳನ್ನು ನಿರ್ವಹಿಸುವುದು

(ii) ಕಲೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಗುರುತಿಸುವುದು

(iii) ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳನ್ನು ಸಂರಕ್ಷಿಸುವುದು ಮತ್ತು ಪುನರುಜ್ಜೀವನಗೊಳಿಸುವುದು

(iv) ಯೂಥ್ ಕ್ಲಬ್‌ಗಳಿಗೆ ಉತ್ತೇಜನ ನೀಡುವುದು

(v) ಬಡ ಮತ್ತು ನಿರ್ಗತಿಕ ಕಲಾವಿದರಿಗೆ ನೆರವು ನೀಡುವುದು ಮತ್ತು ಅವರಿಗೆ ರಕ್ಷಣೆ ಒದಗಿಸವುದು

(vi) ಕೋಮು ಮತ್ತು ಧಾರ್ಮಿಕ ಸೌಹಾರ್ದತೆಯನ್ನು ಕಾಪಾಡುವುದು

(vii) ಗ್ರಾಮ ಪಂಚಾಯಿತಿ ಮತ್ತು ಸಮೂಹ ಮಟ್ಟಗಳಲ್ಲಿ ಸಾಂಸ್ಕೃತಿಕ ಕೇಂದ್ರಗಳು, ಸಮುದಾಯ ಭವನಗಳು, ಬಯಲು ರಂಗಮಂದಿರಗಳನ್ನು ನಿರ್ಮಿಸುವುದು ಮತ್ತು ಅವುಗಳನ್ನು ನಿರ್ವಹಿಸುವುದು

(viii) ಗ್ರಾಮ ಪಂಚಾಯಿತಿ ಮತ್ತು ಸಮೂಹ ಮಟ್ಟಗಳಲ್ಲಿ ಯುವಜನ ಉತ್ಸವಗಳನ್ನು ಏರ್ಪಡಿಸುವುದು

(ix) ಯುವಕರಿಗೆ ಜೀವನ ಕೌಶಲ್ಯ ಶಿಕ್ಷಣ ಮತ್ತು ನಾಯಕತ್ವ ತರಬೇತಿ ನೀಡುವುದು ಹಾಗೂ ಮನರಂಜನಾ ಚಟುವಟಿಕೆಗಳನ್ನು ಆಯೋಜಿಸುವುದು.

**18. ಮಾರುಕಟ್ಟೆ ಸೌಲಭ್ಯ ಕಲ್ಪಿಸುವುದು ಮತ್ತು ದನಗಳ ಜಾತ್ರೆಗಳನ್ನು ಒಳಗೊಂಡಂತೆ ಜಾತ್ರೆಗಳನ್ನು ನಡೆಸುವುದು**

(i) ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಸಾರ್ವಜನಿಕ ಮಾರುಕಟ್ಟೆಗಳನ್ನು ಸ್ಥಾಪಿಸುವುದು, ಮಾರುಕಟ್ಟೆ ಸೌಲಭ್ಯಗಳನ್ನು ಕಲ್ಪಿಸುವುದು ಮತ್ತು ಅವುಗಳನ್ನು ನಿರ್ವಹಿಸುವುದು

(ii) ದನಗಳ ಜಾತ್ರೆಗಳನ್ನು ಒಳಗೊಂಡಂತೆ, ಜಾತ್ರೆಗಳನ್ನು ಮತ್ತು ಉತ್ಸವಗಳನ್ನು ನಿಯಂತ್ರಿಸುವುದು ಮತ್ತು ನಡೆಸುವುದು

(iii) ಗ್ರಾಮೀಣ ಕೃಷಿ ಉತ್ಪನ್ನಗಳು ಮತ್ತು ಕರಕುಶಲ ಉತ್ಪನ್ನಗಳನ್ನು ನಿರ್ವಹಿಸುವುದು ಮತ್ತು ಅವುಗಳ ಮಾರುಕಟ್ಟೆ ಉತ್ತೇಜನ ನೀಡುವುದು

(iv) ಕೃಷಿ ಉತ್ಪನ್ನಗಳಿಗೆ ದಾಸ್ತಾನು ಮತ್ತು ಶೀತಲ ದಾಸ್ತಾನು ಸೌಲಭ್ಯಗಳನ್ನು ಒದಗಿಸುವುದು

(v) ಕೃಷಿ ಉತ್ಪನ್ನದ ನೇರ ಮಾರುಕಟ್ಟೆ ಮತ್ತು ಇ–ಮಾರಾಟಕ್ಕಾಗಿ ರೈತರಿಗೆ ಸೌಲಭ್ಯ ಕಲ್ಪಿಸುವುದು

**19. ಸಾರ್ವಜನಿಕ ಆರೋಗ್ಯ (ಆಸ್ಪತ್ರೆಗಳು, ಸಾರ್ವಜನಿಕ ಆರೋಗ್ಯ ಕೇಂದ್ರಗಳನ್ನು ಒಳಗೊಂಡ ಆರೋಗ್ಯ) ಮತ್ತು ಕುಟುಂಬ ಕಲ್ಯಾಣ**

(i) ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಅಲೋಪಥಿಕ್ ಮತ್ತು ಆಯುರ್ವೇದ, ಸಿದ್ಧ, ಯುನಾನಿ ಹಾಗೂ ಪ್ರಕೃತಿ ಚಿಕಿತ್ಸೆ ಮತ್ತು ಯೋಗದಂಥ ಭಾರತೀಯ ವೈದ್ಯಕೀಯ ಪದ್ಧತಿಗಳ ಆರೋಗ್ಯ ಸೌಲಭ್ಯಗಳನ್ನು ಮೇಲ್ವಿಚಾರಣೆ ಮಾಡುವುದು

(ii) ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಆರೋಗ್ಯ ಉಪ–ಕೇಂದ್ರದ ಸ್ಥಾಪನೆಗಾಗಿ ಸಕ್ಷಮ ಪ್ರಾಧಿಕಾರಕ್ಕೆ ಪ್ರಸ್ತಾವಗಳನ್ನು ಕಳುಹಿಸುವುದು ಮತ್ತು ಅವುಗಳಿಗೆ ಮಂಜೂರಾತಿ ಪಡೆಯುವುದು ಹಾಗೂ ಆರೋಗ್ಯ ಸೇವೆಗಳನ್ನು ಒದಗಿಸುವುದು ಸೌಲಭ್ಯ ಕಲ್ಪಿಸುವುದು ಮತ್ತು ಅವುಗಳ ಮೇಲ್ವಿಚಾರಣೆ ಮಾಡುವುದು, ಔಷಧಾಲಯಗಳನ್ನು ಒದಗಿಸುವುದು

(iii) ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು

(iv) ಲಸಿಕೆ ನೀಡುವ ಹಾಗೂ ಇತರೆ ರೋಗ ನಿರೋಧಕ ಕ್ರಮಗಳನ್ನು ಕೈಗೊಳ್ಳುವುದು

(v) ತಿನಿಸು ಹಾಗೂ ಮನರಂಜನಾ ಸಂಸ್ಥೆಗಳಿಗೆ ಲೈಸೆನ್ಸ್ ನೀಡುವುದು

(vi) ತೊಂಡು ನಾಯಿಗಳು, ಬೀದಿ ನಾಯಿಗಳನ್ನು ಕೊಲ್ಲುವುದು

(vii) ಸಾಂಕ್ರಾಮಿಕ ರೋಗಗಳ ತಡೆಗಾಗಿ ಮತ್ತು ಅವುಗಳ ವಿರುದ್ಧ ಪರಿಹಾರಾತ್ಮಕ ಕ್ರಮಗಳನ್ನು ಜಾರಿಗೆ ತರುವುದು

(viii) ಪ್ರಸೂತಿ ಹಾಗೂ ಶಿಶು ಕಲ್ಯಾಣ ಕೇಂದ್ರಗಳ ಮೇಲ್ವಿಚಾರಣೆ ಮಾಡುವುದು

(ix) ಮಾಂಸ, ಮೀನು ಮತ್ತು ಇತರ ಹಾಳಾಗುವ ಆಹಾರ ಪದಾರ್ಥಗಳ ಮಾರಾಟವನ್ನು ನಿಯಂತ್ರಿಸುವುದು

**20. ನೈರ್ಮಲ್ಯ**

(i) ಸಾರ್ವಜನಿಕ ರಸ್ತೆಗಳು, ಚರಂಡಿಗಳು, ಸ್ನಾನ ಘಟ್ಟದ ಕೊಳಗಳು, ಬಾವಿಗಳು, ಕೊಳಗಳು ಮತ್ತು ಇತರ ಸಾರ್ವಜನಿಕ ಸ್ಥಳಗಳನ್ನು ಸ್ವಚ್ಛವಾಗಿರಿಸಿಕೊಳ್ಳುವುದು ಹಾಗೂ ಸಂರಕ್ಷಿಸುವುದು

(ii) ಸ್ಮಶಾನ ಹಾಗೂ ಸಮಾಧಿ ಭೂಮಿಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು

(iii) ದ್ರವ ತ್ಯಾಜ್ಯ ನಿರ್ವಹಣಾ ವ್ಯವಸ್ಥೆಯನ್ನು ಸ್ಥಾಪಿಸುವುದು ಮತ್ತು ಅದನ್ನು ನಿರ್ವಹಿಸುವುದು

(iv) ಬಹು ಗ್ರಾಮ ಘನ ತ್ಯಾಜ್ಯ ನಿರ್ವಹಣಾ ಸ್ಥಾವರಗಳಿಗೆ ಘನ ತ್ಯಾಜ್ಯವನ್ನು ಸಂಗ್ರಹಿಸುವುದು, ಬೇರ್ಪಡಿಸುವುದು ಮತ್ತು ರವಾನಿಸುವುದು

(v) ವೈಯಕ್ತಿಕ, ಸಮುದಾಯಿಕ ಶೌಚಾಲಯಗಳು ಮತ್ತು ಸ್ನಾನಗೃಹಗಳು ಹಾಗೂ ನೈರ್ಮಲ್ಯ ಸಂಕೀರ್ಣಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು

(vi) ವಾಸಸ್ಥಳಗಳು, ಸಾರ್ವಜನಿಕ ಸ್ಥಳಗಳು ಮತ್ತು ಎಲ್ಲಾ ಸ್ಥಳಿಯ ಸಂಸ್ಥೆಗಳನ್ನು ಒಳಗೊಂಡಂತೆ ಗ್ರಾಮ ಪಂಚಾಯಿತಿ ಮಟ್ಟದಲ್ಲಿನ ನೈರ್ಮಲ್ಯ ಕಾರ್ಯಕ್ರಮವನ್ನು ಯೋಜಿಸುವುದು ಮತ್ತು ಅದನ್ನು ಅನುಷ್ಠಾನಗೊಳಿಸುವುದು

(vii) ಆರೋಗ್ಯ ಮತ್ತು ನೈರ್ಮಲ್ಯ ನೀತಿಯನ್ನು ಅಭಿವೃದ್ಧಿ ಪಡಿಸುವುದು ಮತ್ತು ಅದನ್ನು ಅನುಷ್ಠಾನಗೊಳಿಸುವುದು

(viii) ಕ್ಲೇಮು ಮಾಡದ ಪ್ರಾಣಿಗಳ ಮತ್ತು ಮೃತ ದೇಹಗಳನ್ನು ವಿಲೆ ಮಾಡುವುದು ಹಾಗೂ ಚರ್ಮಗಳನ್ನು ಮತ್ತು ತೊಗಲುಗಳನ್ನು ಹದ ಮಾಡುವುದನ್ನು, ಸಂಸ್ಕರಿಸುವುದನ್ನು ಹಾಗೂ ಬಣ್ಣ ಹಾಕುವುದನ್ನು ನಿಯಂತ್ರಿಸುವುದು

(ix) ಗ್ರಾಮ ಪಂಚಾಯಿತಿ ಮಟ್ಟದಲ್ಲಿ ನೈರ್ಮಲ್ಯ ಮತ್ತು ತ್ಯಾಜ್ಯ ನಿರ್ವಹಣಾ ಕಾರ್ಯಕ್ರಮಗಳ ಅನುಷ್ಠಾನ

**21. ಮಹಿಳಾ ಮತ್ತು ಮಕ್ಕಳ ಕಲ್ಯಾಣ, ವಿಶೇಷವಾಗಿ ವಿಕಲಚೇತನರು ಮತ್ತು ಮಾನಸಿಕ ಸವಾಲುಗಳುಳ್ಳವರ ಕಲ್ಯಾಣ**

(i) ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಬಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನ ಮತ್ತು ಮೇಲ್ವಿಚಾರಣೆಯಲ್ಲಿ ಪಾಲ್ಗೊಳ್ಳುವುದು

(ii) ಶಾಲಾ ಮಕ್ಕಳಿಗಾಗಿ ಆರೋಗ್ಯ ಮತ್ತು ಪೋಷಕ ಆಹಾರ ಕಾರ್ಯಕ್ರಮಗಳ ಯೋಜನೆ ಸಿದ್ಧಪಡಿಸುವ ಕಾರ್ಯದ ಮತ್ತು ಅದರ ಅನುಷ್ಠಾನದ ಮೇಲ್ವಿಚಾರಣೆ ಮತ್ತು ಅದರಲ್ಲಿ ಪಾಲ್ಗೊಳ್ಳುವುದು

(iii) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ಸಬಲೀಕರಣ ಕಾರ್ಯಕ್ರಮಗಳಲ್ಲಿ ಸ್ಥಳೀಯ ಅಭಿವೃದ್ಧಿ ಏಜೆನ್ಸಿಗಳು, ಖಾಸಗಿ ಏಜೆನ್ಸಿಗಳು, ಸ್ವಯಂ ಸೇವಾ ಸಂಘಟನೆಗಳಿಂದ ನೆರವನ್ನು ಪಡೆಯುವುದನ್ನು ಉತ್ತೇಜಿಸುವುದು

(iv) ಅಂಗನವಾಡಿಗಳ ಸ್ಥಾಪನೆಗಾಗಿ ಸಕ್ಷಮ ಪ್ರಾಧಿಕಾರಗಳಿಗೆ ಪ್ರಸ್ತಾವಗಳನ್ನು ಕಳುಹಿಸುವುದು ಮತ್ತು ಅವರಿಂದ ಮಂಜೂರಾತಿ ಪಡೆಯುವುದು

(v) ಅಂಗನವಾಡಿಗಳ ಮೇಲ್ವಿಚಾರಣೆ ಮಾಡುವುದು

(vi) ನಿರ್ಗತಿಕರು, ವಿಧವೆಯರು, ವಯಸ್ಸಾದವರು, ವಿಶೇಷವಾಗಿ ವಿಕಲಚೇತನರಿಗೆ ಪಿಂಚಣಿ, ಮನಸ್ವಿನಿ ಮುಂತಾದಂತಹ ವಿವಿಧ ಸಾಮಾಜಿಕ ಸುರಕ್ಷಿತ ಸ್ಕೀಮುಗಳ ಅಡಿಯಲ್ಲಿ ಗ್ರಾಮ ಸಭೆಗಳಲ್ಲಿ ಆಯ್ಕೆಯಾದ ಫಲಾನುಭವಿಗಳ ಪಟ್ಟಿಯನ್ನು ಸಂಬಂಧಪಟ್ಟ ಇಲಾಖೆಗಳಿಗೆ ಕಳುಹಿಸುವುದು

(vii) ಬಡವರಿಗಾಗಿ ಗುಂಪು ವಿಮಾ ಯೋಜನೆಯನ್ನು ಅನುಷ್ಠಾನಗೊಳಿಸಲು ಅನುಕೂಲ ಕಲ್ಪಿಸುವುದು

(viii) ವಿಶೇಷವಾಗಿ ವಿಕಲಚೇತನರು, ಮಾನಸಿಕ ಸವಾಲುಗಳುಳ್ಳವರು ಮತ್ತು ಸಾಮಾಜಿಕವಾಗಿ ಬಹಿಷ್ಕೃತರಾದಂಥ/ಹೊರಗುಳಿದಂಥ ಗುಂಪುಗಳನ್ನು ಒಳಗೊಂಡು ಅಂಥವರಿಗಾಗಿ ಇರುವ ಸಾಮಾಜ ಕಲ್ಯಾಣ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ಮತ್ತು ಅಂತಹ ಕಾರ್ಯಕ್ರಮಗಳ ಅನುಷ್ಠಾನದ ಮೇಲ್ವಿಚಾರಣೆ ಮಾಡುವುದು.

**22. ಅನುಸೂಚಿತ ಜಾತಿಗಳು, ಅನುಸೂಚಿತ ಪಂಗಡಗಳು ಮತ್ತು ಇತರೆ ಹಿಂದುಳಿದ ಜಾತಿಗಳ ಅಭಿವೃದ್ಧಿ**

(i) ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಾಲೋನಿಯಲ್ಲಿ ಮೂಲಸೌಲಭ್ಯಗಳನ್ನು ಒದಗಿಸುವುದು

(ii) ಆದ್ಯತೆಯ ಮೇರೆಗೆ ಗ್ರಾಮ ಪಂಚಾಯಿತಿಯ ಸ್ವಂತ ಸಂಪನ್ಮೂಲಗಳಿಂದ ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡಗಳ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ನೆರವನ್ನು ಒದಗಿಸುವುದು

(iii) ಸಮಾಜದ ದುರ್ಬಲ ವರ್ಗಗಳಲ್ಲಿ, ವಿಶೇಷವಾಗಿ ಅನುಸೂಚಿತ ಜಾತಿ ಮತ್ತು ಅನುಸೀಚಿತ ಪಂಗಡಗಳಲ್ಲಿ ಕಾನೂನು ಮತ್ತು ಇತರ ವಿಷಯಗಳ ಕುರಿತು ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ರೂಪಿಸುವುದು, ಸಮನ್ವಯಗೊಳಿಸುವುದು ಹಾಗೂ ಅನುಷ್ಠಾನಗೊಳಿಸುವುದು

(iv) ದುರ್ಬಲ ವರ್ಗಗಳ ಕಲ್ಯಾಣ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ಮತ್ತು ಅವುಗಳ ಅನುಷ್ಠಾನವನ್ನು ನೋಡಿಕೊಳ್ಳುವುದು

(v) ಅನುಸೂಚಿತ ಜಾತಿ ಹಾಗೂ ಅನುಸೂಚಿತ ಪಂಗಡ ಹಾಗೂ ಹಿಂದುಳಿದ ಸಮುದಾಯಗಳಿಗಾಗಿ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲು ಯೋಜಿಸುವುದು ಮತ್ತು ಅದನ್ನು ಮೇಲ್ವಿಚಾರಣೆ ಮಾಡುವುದು

(vi) ವ್ಯಕ್ತಿಗಳು ಮತ್ತು ಸಮುದಾಯದ ಸ್ವಾತಂತ್ರ್ಯ ಮತ್ತು ಘನತೆಯನ್ನು ಕುಗ್ಗಿಸುವ ಅನುಸೂಚಿತ ಜಾತಿ, ಅನುಸೂಚಿತ ಪಂಗಡಗಳು ಮತ್ತು ಹಿಂದುಳಿದ ಸಮುದಾಯಗಳ ವಿರುದ್ಧದ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳನ್ನು ತಡೆಯುವುದು

**23. ಜಾನುವಾರು ಸಾಕಾಣಿಕೆ ಕೇಂದ್ರಗಳು, ಕಾರು/ಆಟೋರಿಕ್ಷಾ ಮತ್ತು ಬಸ್ಸುಗಳ ನಿಲ್ದಾಣಗಳು, ಎತ್ತಿನಗಾಡಿ ನಿಲ್ದಾಣಗಳ ನಿರ್ಮಾಣ ಮತ್ತು ನಿರ್ವಹಣೆ**

ಜಾನುವಾರು ಸಾಕಾಣಿಕೆ ಕೇಂದ್ರ, ಸಮುದಾಯ ಜಾನುವಾರು ಕೊಟ್ಟಿಗೆಗಳು, ದನದ ದೊಡ್ಡಿಗಳು, ಗ್ರಾಮೀಣ ಬಸ್ ನಿಲ್ದಾಣ, ರಿಕ್ಷಾ ನಿಲ್ದಾಣ, ಟ್ಯಾಕ್ಸಿ/ಆಟೋ ರಿಕ್ಷಾ ನಿಲ್ದಾಣ, ಎತ್ತಿನಗಾಡಿ ನಿಲ್ದಾಣ, ಕಸಾಯಿಖಾನೆಗಳು ಮತ್ತು ವಾಣಿಜ್ಯ ಸಂಕೀರ್ಣಗಳ ನಿರ್ಮಾಣ ಮತ್ತು ನಿರ್ವಹಣೆ

**24. ಎಲ್ಲಾ ಪ್ರಮಾಣ ಪತ್ರಗಳನ್ನು ನೀಡುವುದು**

ಗಣಿ ಮತ್ತು ಭೂ ವಿಜ್ಞಾನ, ವಿದ್ಯುದೀಕರಣ, ಅಬಕಾರಿ, ಜೀವವೈವಿಧ್ಯತೆ, ಭೂಪರಿವರ್ತನೆ ಮುಂತಾದವುಗಳಿಗಾಗಿ ನಿರಾಪೇಕ್ಷಣೆ ಪ್ರಮಾಣ ಪತ್ರ, ಹೋಮ್ ಸ್ಟೇ, ರೆಸಾರ್ಟ್‌ಗಳು, ಬಾರ್ ಮತ್ತು ರೆಸ್ಟೋರೆಂಟ್‌ಗಳು, ವಿದ್ಯಾರ್ಥಿ ನಿಲಯಗಳು, ಮದ್ಯದಂಗಡಿಗಳು, ಸ್ಮಶಾನ/ಸಮಾಧಿ ಭೂಮಿ, ಮತ್ತು ಚಿತಾಗಾರ, ಕಸಾಯಿಖಾನೆ ಮುಂತಾದವುಗಳಿಗೆ ಲೈಸೆನ್ಸ್ ನೀಡುವುದು.

25. **ಅಂಕಿ – ಅಂಶ ನಿರ್ವಹಣೆ:**

ಗ್ರಾಮಕ್ಕೆ ಸಂಬಂಧಿಸಿದ ಎಲ್ಲಾ ಅಂಕಿ–ಅಂಶಗಳನ್ನು ಸಂಗ್ರಹಿಸುವುದು. ಕೋಷ್ಟಕ ಸಿದ್ಧಪಡಿಸುವುದು ಮತ್ತು ಇಂದೀಕರಿಸುವುದು

26. **ಯೋಜನೆ:**

ದೂರದೃಷ್ಟಿಯುಳ್ಳ ಜನರ ಯೋಜನೆ ಮತ್ತು ವಾರ್ಷಿಕ ಯೋಜನೆಯನ್ನು ಸಿದ್ಧಪಡಿಸುವುದಕ್ಕಾಗಿ ತಾಂತ್ರಿಕ ಮತ್ತು ವಿಷಯ ತಜ್ಞರ ತಂಡವನ್ನು ರಚಿಸುವುದು

27. **ಸಹಕಾರ:**

ಸಹಕಾರ ಚಟುವಟಿಕೆಗಳನ್ನು ಜನಪ್ರಿಯಗೊಳಿಸಲು ಮತ್ತು ಬಲಪಡಿಸಲು ಕಾರ್ಯಕ್ರಮಗಳನ್ನು ಸಿದ್ಧಪಡಿಸುವುದು ಮತ್ತು ಅನುಷ್ಠಾನಗೊಳಿಸುವುದು

28. **ಗ್ರಾಮೀಣ ಪರಿಸರ ವ್ಯವಸ್ಥೆ ಮತ್ತು ಜೀವಿ ಪರಿಸ್ಥಿತಿ:**

(i) ಗ್ರಾಮೀಣ ಪರಿಸರ ವ್ಯವಸ್ಥೆ ಮತ್ತು ಜೀವಿ ಪರಿಸ್ಥಿತಿಯನ್ನು ರಾಷ್ಟ್ರೀಯ ಮತ್ತು ರಾಜ್ಯ ನೀತಿಗನುಗುಣವಾಗಿ ಕಾಪಾಡುವುದಕ್ಕಾಗಿ ಮತ್ತು ಸಂರಕ್ಷಿಸುವುದಕ್ಕಾಗಿ ಯೋಜನೆ ರೂಪಿಸುವುದು ಮತ್ತು ಅದನ್ನು ಅನುಷ್ಠಾನಗೊಳಿಸುವುದು.

(ii) ಗ್ರಾಮ ಪಂಚಾಯತ್ ಜೀವವೈವಿಧ್ಯತೆ ನಿರ್ವಹಣಾ ಸಮಿತಿಯನ್ನು ಸ್ಥಾಪಿಸುವುದು.

(iii) ಜನರ ಜೈವಿಕ ವೈವಿಧ್ಯತೆ ರಿಜಿಸ್ಟರನ್ನು ಸಿದ್ದಪಡಿಸುವುದು.

(iv) ಜೀವವೈವಿಧ್ಯತಾ ಅಧಿನಿಯಮ 2002ಕ್ಕಾಗಿ ಯೋಜನೆಗಳನ್ನು ಮತ್ತು ಕಾರ್ಯಕ್ರಮಗಳನ್ನು ಸಿದ್ದಪಡಿಸುವುದು ಮತ್ತು ಅನುಷ್ಠಾನಗೊಳಿಸುವುದು.

(v) ಪರಿಸರ ಸೂಕ್ಷ್ಮ ಸಂವೇದಿ ಪ್ರದೇಶಗಳನ್ನು ಕಾಪಾಡುವುದು.

(vi) ಪರಿಸರ ಕಾಪಾಡಲು ಯೋಜನೆಗಳನ್ನು ಸಿದ್ಧಪಡಿಸುವುದು ಮತ್ತು ಅನುಷ್ಠಾನಗೊಳಿಸುವುದು ಉದ್ಯಾನಗಳನ್ನು ನಿರ್ವಹಿಸುವುದು.

(vii) ಸಾರ್ವಜನಿಕ ಸ್ಥಳಗಳಲ್ಲಿ ತಿಪ್ಪೆಗುಂಡಿಗಳನ್ನು ನಿಯಂತ್ರಿಸುವುದು ಹಾಗೂ ಗ್ರಾಮೀಣ ಮಾರುಕಟ್ಟೆಗಳನ್ನು ನಿಯಂತ್ರಿಸುವುದು.

**29. ಆದಾಯ ಸೃಜನೆ ಕಾರ್ಯಚಟುವಟಿಕೆಗಳು:**

ಸ್ವಂತ ಸಂಪನ್ಮೂಲಗಳನ್ನು ಹೆಚ್ಚಿಸಲು ವಿವಿಧ ಆದಾಯ ಸೃಜನೆ ಕಾರ್ಯ ಚಟುವಟಿಕೆಗಳನ್ನು ಕೈಗೊಳ್ಳುವುದು.

**30. ಜ್ಞಾನ ನಿರ್ವಹಣೆ:–**

(i) ಕುಟುಂಬಗಳ ದತ್ತಾಂಶದ ಸಂಗ್ರಹ ಮತ್ತು ಸಂಕಲನ ಮತ್ತು ಡಾಟಾಬೇಸ್ ನಿರ್ವಹಣೆ.

(ii) ಗ್ರಾಮದ ಇತಿಹಾಸ, ಸಂಸ್ಕೃತಿ ಪರಂಪರೆಯನ್ನು ದಾಖಲುಮಾಡುವುದು.

(iii) ಗ್ರಾಮದ ಮಾನವ ಅಭಿವೃದ್ಧಿಯ ಸಮೀಕ್ಷೆಗಳು ಮತ್ತು ವ್ಯಾಸಂಗಳನ್ನು ನಡೆಸುವುದು.

(iv) ಮಾನವ ಅಭಿವೃದ್ಧಿಯ ಸೂಚ್ಯಂಕದ ನಿಯತಕಾಲಿಕ ಲೆಕ್ಕಾಚಾರ.

(v) ಗ್ರಾಮ ಪಂಚಾಯತಿಯ ಜನರ ಎಲ್ಲಾ ದತ್ತಾಂಶವನ್ನು ಲಭ್ಯವಾಗುವಂತೆ ಮಾಡುವುದು.

(vi) ಅರಿವು ಉಂಟುಮಾಡುವುದು ಮತ್ತು ಮಾಹಿತಿ, ಶಿಕ್ಷಣ ಹಾಗೂ ಎಲ್ಲಾ ಸರ್ಕಾರಿ ಸ್ಕೀಮ್‌ಗಳಿಗೆ ಸಂಪರ್ಕ ಚಟುವಟಿಕೆಗಳು.

**31. ಸಮುದಾಯ ಸ್ವತ್ತು ನಿರ್ವಹಣೆ:**

(i) ಗ್ರಾಮ ಪಂಚಾಯತಿಗಳಿಗೆ ಸಮುದಾಯ ಸ್ವತ್ತುಗಳ ರಕ್ಷಣೆ, ಸಂರಕ್ಷಣೆ ಮತ್ತು ನಿರ್ವಹಣೆ ಇದರ ಮ್ಯಾಪಿಂಗ್ ಅಳತೆ ಸಮಗ್ರ ದಾಖಲೀಕರಣ ಮತ್ತು ಇದರ ನಿರ್ವಹಣೆ

(ii) ಕೆರೆಗಳು ನೀರಿನ ಗ್ರೋವ್ ಕಾಲುವೆಗಳು, ಕೃಷಿ ಪಿಟ್‌ಗಳು, ಬಾವಿ, ಕೊಳವೆ ಬಾವಿ ಮತ್ತು ಇತರ ಬಾವಿಗಳು ಹುಲ್ಲುಗಾವಲು, ಅರಣ್ಯ ನೆಡುತೋಪು ಇತ್ಯಾದಿಗಳ ಕ್ರಮಬದ್ಧ ದಾಖಲೀಕರಣ ಮತ್ತು ರಕ್ಷಣೆ.

## ಅನುಸೂಚಿ–II

### (145ನೇ ಪ್ರಕಣದಲ್ಲಿ ನೋಡಿ)

### ಸಾಮಾನ್ಯ

ಅನುಸೂಚಿ–IIರಲ್ಲಿ ನಿರೂಪಿಸಿರುವ ವಿಷಯಗಳಿಗೆ ಸಂಬಂಧಪಟ್ಟಂತೆ, ತಾಲ್ಲೂಕು ಪಂಚಾಯತಿಯ ಬಳಿ ಖರ್ಚು ಮಾಡುವುದಕ್ಕೆ ಲಭ್ಯವಿರುವ ತಾಲ್ಲೂಕು ಪಂಚಾಯತಿ ನಿಧಿಗಳಿಗೆ ಸಂಬಂಧಿಸಿರುವಷ್ಟರಮಟ್ಟಿಗೆ, ತಾಲ್ಲೂಕು ಪಂಚಾಯತ್‌ಗೆ ಸಂಬಂಧಪಟ್ಟಂತೆ ರೂಪಿಸಿರುವ ಕಾರ್ಯಚಟುವಟಿಕೆ ನಕ್ಷೆಯಲ್ಲಿ ವಿವರಿಸಿರುವಂತೆ ತಾಲ್ಲೂಕು ಪಂಚಾಯತಿ ಪ್ರದೇಶದ ಅಗತ್ಯತೆಗಳನ್ನು ಈಡೇರಿಸುವುದು ತಾಲ್ಲೂಕು ಪಂಚಾಯತ್‌ಗಳ ಕರ್ತವ್ಯವಾಗಿರತಕ್ಕದ್ದು.

ಈ ಅಧಿನಿಯಮದ ಇತರೆ ಉಪಬಂಧಗಳಿಗೆ ಮತ್ತು ಸರ್ಕಾರದ ನಿರ್ದೇಶನಕ್ಕೆ ಒಳಪಟ್ಟು, ತಾಲ್ಲೂಕು ಪಂಚಾಯತಿಯ, ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ ಸಾಧನೆಗಾಗಿ, ಅನುಸೂಚಿ–IIರಲ್ಲಿ ನಿರೂಪಿಸಿರುವ ವಿಷಯಗಳನ್ನು ನಿರ್ವಹಿಸುವ ಹಾಗೂ ಅವುಗಳಲ್ಲಿ ನಿರ್ದಿಷ್ಟಪಡಿಸಿರುವ ವಿಷಯಗಳಿಗೆ ಸಂಬಂಧಿಸಿದಂತೆ ಸ್ಕೀಮುಗಳನ್ನು ಸಿದ್ಧಪಡಿಸುವ ಮತ್ತು ಅನುಷ್ಠಾನಗೊಳಿಸುವ ಅಧಿಕಾರ ಹೊಂದಿರತಕ್ಕದ್ದು.

**1. ಸಾಮಾನ್ಯ ಪ್ರಕಾರ್ಯಗಳು**

(i) ಈ ಅಧಿನಿಯಮದ ಮೂಲಕ ತನಗೆ ವಹಿಸಿಕೊಟ್ಟ ಮತ್ತು ಸರ್ಕಾರವು ಅಥವಾ ಜಿಲ್ಲಾ ಪಂಚಾಯತಿಯು ವಹಿಸಿದ ಯೋಜನೆಗಳಿಗೆ ಸಂಬಂಧಿಸಿದಂತೆ ವಾರ್ಷಿಕ ಯೋಜನೆಗಳನ್ನು ಸಿದ್ಧಪಡಿಸುವುದು ಮತ್ತು ಅದನ್ನು ಜಿಲ್ಲಾ ಯೋಜನೆಯೊಂದಿಗೆ ಸೇರಿಸುವುದಕ್ಕಾಗಿ ಗೊತ್ತುಪಡಿಸಿದ ಸಮಯದೊಳಗೆ ಜಿಲ್ಲಾ ಪಂಚಾಯತಿಗೆ ಒಪ್ಪಿಸುವುದು.

(ii) ತಾಲ್ಲೂಕಿನಲ್ಲಿರುವ ಎಲ್ಲ ಗ್ರಾಮ ಪಂಚಾಯತಿಗಳ ವಾರ್ಷಿಕ ಯೋಜನೆಗಳನ್ನು ಪರಿಶೀಲಿಸುವುದು ಮತ್ತು ಕ್ರೋಡೀಕರಿಸುವುದು ಮತ್ತು ಹಾಗೆ ಕ್ರೋಡೀಕರಿಸಿದ ಯೋಜನೆಗಳನ್ನು ಜಿಲ್ಲಾ ಪಂಚಾಯತಿಗೆ ಒಪ್ಪಿಸುವುದು.

(iii) ತಾಲ್ಲೂಕು ಪಂಚಾಯತಿಯ ವಾರ್ಷಿಕ ಬಜೆಟ್‌ಅನ್ನು ಸಿದ್ಧಪಡಿಸುವುದು ಮತ್ತು ಅದನ್ನು ಗೊತ್ತುಪಡಿಸಿದ ಅವಧಿಯೊಳಗೆ ಜಿಲ್ಲಾ ಪಂಚಾಯತಿಗೆ ಒಪ್ಪಿಸುವುದು.

(iv) ಸರ್ಕಾರದಿಂದ ಅಥವಾ ಜಿಲ್ಲಾ ಪಂಚಾಯತಿಯಿಂದ ತನಗೆ ವಹಿಸಬಹುದಾದಂಥ ಪ್ರಕಾರ್ಯಗಳನ್ನು ನಿರ್ವಹಿಸುವುದು ಮತ್ತು ಕೆಲಸಗಳನ್ನು ಕಾರ್ಯಗತಗೊಳಿಸುವುದು.

(v) ಪ್ರಕೃತಿ ವಿಕೋಪಗಳಲ್ಲಿ ಪರಿಹಾರವನ್ನು ಒದಗಿಸುವುದು.

**2. ಕೃಷಿ, ತೋಟಗಾರಿಕೆ ಮತ್ತು ರೇಷ್ಮೆ ಕೃಷಿ ಮತ್ತು ಸಾಮಾನ್ಯ ಪ್ರಕಾರ್ಯಗಳು.–**

(i) ಕೃಷಿ ಮತ್ತು ತೋಟಗಾರಿಕಾ ಸಮಗ್ರ ಗ್ರಾಮ ಕೃಷಿ ಯೋಜನೆಯನ್ನು ಸಿದ್ಧಪಡಿಸುವುದು ಮತ್ತು ಸದರಿ ಯೋಜನೆಯನ್ನು ಕಾರ್ಯರೂಪಕ್ಕೆ ತರುವುದಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯತ್ ಮಟ್ಟದಲ್ಲಿ ಸಾಮಾನ್ಯ ಹಾಗೂ ತಾಂತ್ರಿಕ ತರಬೇತಿಯನ್ನು ಆಯೋಜಿಸುವುದು. ಕೃಷಿ ಮತ್ತು ತೋಟಗಾರಿಕೆಯನ್ನು ಉತ್ತೇಜಿಸುವುದು ಮತ್ತು ಅಭಿವೃದ್ಧಿಪಡಿಸುವುದು.

(ii) ಕೃಷಿ ಬಿತ್ತನೆ ಬೀಜ ಕೇಂದ್ರಗಳನ್ನು (ತೋಟಗಾರಿಕಾ ನರ್ಸರಿಯೂ ಸೇರಿದಂತೆ) ನಿರ್ವಹಿಸುವುದು

(iii) ಕೃಷಿ ಮೇಳಗಳನ್ನು ಏರ್ಪಡಿಸುವುದು, ತರಕಾರಿಗಳನ್ನು, ಹಣ್ಣುಗಳು ಮತ್ತು ಹೂಗಳನ್ನು ಮಾರಾಟ ಮಾಡುವುದು.

(iv) ತಾಂತ್ರಿಕ ಸಿಬ್ಬಂದಿಯ ಮೂಲಕ ತರಬೇತಿಯನ್ನು ನಡೆಸಿ ತಾಂತ್ರಿಕ ಬೆಂಬಲವನ್ನು ಕಲ್ಪಿಸುವುದು ಮತ್ತು ರೈತರಿಗೆ ತರಬೇತಿ ನೀಡಿ ಸುಧಾರಿತ ಸಾಗುವಳಿಯ ವಿಧಾನಗಳನ್ನು ಬಳಸಿಕೊಳ್ಳುವಂತೆ ಪ್ರಸಾರ ಮಾಡುವುದು

(v) ಉಗ್ರಾಣಗಳು ಮತ್ತು ಶೈತ್ಯ ಸಂಗ್ರಹಣಾಗಾರಗಳನ್ನು ಅವುಗಳ ಅಗತ್ಯದ ಆಧಾರದ ಮೇಲೆ ಸ್ಥಾಪಿಸಲು ಶಿಫಾರಸು ಮಾಡುವುದು, ತಾಲ್ಲೂಕು ಮಟ್ಟದ ಸಹಕಾರಿ ಸಂಘಗಳಿಗೆ ಮತ್ತು ಕೃಷಿ ಮಾರುಕಟ್ಟೆಗೆ ಅನುಕೂಲ ಕಲ್ಪಿಸುವುದು ಹಾಗೂ ತಾಲ್ಲೂಕು ಮಟ್ಟದಲ್ಲಿ ಮೂಲ ಸೌಕರ್ಯವನ್ನು ನಿರ್ವಹಿಸುವುದು.

(vi) ಗ್ರಾಮ ಪಂಚಾಯತ್‌ಗಳು ಸಂಗ್ರಹಿಸಿದ ಅಂಕಿಅಂಶವನ್ನು ಕ್ರೋಢೀಕರಿಸುವುದು ಮತ್ತು ಕೃಷಿ ಉತ್ಪಾದನೆಗೆ ಹಾಗೂ ಮಾರುಕಟ್ಟೆಗೆ ತಾಲ್ಲೂಕು ಮಟ್ಟದ ಯೋಜನೆಗಳನ್ನು ಸಿದ್ಧಪಡಿಸುವುದು.

(vii) ಕ್ರಿಮಿನಾಶಕ ಮತ್ತು ಕೀಟನಾಶಕಗಳನ್ನು ಸಂಗ್ರಹಿಸುವುದು ಮತ್ತು ವಿತರಿಸುವುದು.

**3. ಸಣ್ಣ ನೀರಾವರಿ**

(i) ಸಣ್ಣ ನೀರಾವರಿ ಕಾಮಗಾರಿಗಳ ನಿರ್ಮಾಣ ಮತ್ತು ನಿರ್ವಹಣೆಯಲ್ಲಿ ಸರ್ಕಾರಕ್ಕೆ ಮತ್ತು ಜಿಲ್ಲಾ ಪಂಚಾಯತಿಗೆ ನೆರವು ನೀಡುವುದು;

(ii) ಸಮೂಹ ಮತ್ತು ವೈಯಕ್ತಿಕ ನೀರಾವರಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವುದು

**4. ಪಶುಸಂಗೋಪನೆ, ಹೈನುಗಾರಿಕೆ, ಕೋಳಿ ಫಾರಂ ಮತ್ತು ಮೀನುಗಾರಿಕೆ**

(i) ತಾಲ್ಲೂಕು ಮಟ್ಟದಲ್ಲಿ ಪ್ರಾಥಮಿಕ ಪಶುವೈದ್ಯಕೀಯ ಕೇಂದ್ರಗಳ, ಪ್ರಥಮ ಚಿಕಿತ್ಸಾ ಕೇಂದ್ರಗಳ ಮತ್ತು ಸಂಚಾರಿ ಪಶುವೈದ್ಯಕೀಯ ಚಿಕಿತ್ಸಾಲಯಗಳ ನಿರ್ವಹಣೆ.

(ii) ಸಾಂಕ್ರಾಮಿಕ ರೋಗಗಳನ್ನು ಹಾಗೂ ಅಂಟು ರೋಗಗಳನ್ನು ನಿಯಂತ್ರಿಸುವುದಕ್ಕೆ ಸಂಬಂಧಿಸಿದ ಪ್ರತಿಬಂಧಕ ಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ ಗ್ರಾಮ ಪಂಚಾಯತ್‌ಗಳಿಗೆ ಚುಚ್ಚುಮದ್ದುಗಳನ್ನು, ಔಷಧಿಗಳನ್ನು ಒದಗಿಸುವುದು ಮತ್ತು ವೈದ್ಯಕೀಯ ನೆರವನ್ನು ಒದಗಿಸುವುದು.

(iii) ಕೃಷಿಕರಿಗೆ ತಾಂತ್ರಿಕತಜ್ಞರ ನೆರವನ್ನು ಒದಗಿಸುವುದು ಮತ್ತು ತರಬೇತಿಗಳನ್ನು ಆಯೋಜಿಸುವುದು.

(iv) ಜಾನುವಾರು, ಕೋಳಿ ಸಾಕಣಿಕೆ ಮತ್ತು ಇತರೆ ಪಶುಗಳ ತಳಿಗಳನ್ನು ಸುಧಾರಿಸುವುದು.

(v) ಪಶುಸಂಗೋಪನೆ, ಹೈನುಗಾರಿಕೆ, ಕೋಳಿ ಸಾಕಣೆ ಮತ್ತು ಮೀನುಗಾರಿಕೆ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಸಹಕಾರಿ ಸಂಘಗಳಿಗೆ ಉತ್ತೇಜನ ನೀಡುವುದು.

**5. ಸಾಮಾಜಿಕ ಅರಣ್ಯ**

(i) ತನ್ನ ನಿಯಂತ್ರಣದ ಅಧೀನದಲ್ಲಿ ಬರುವ ರಸ್ತೆ ಬದಿಗಳಲ್ಲಿ ಮತ್ತು ಇತರ ಸಾರ್ವಜನಿಕ ಜಮೀನಿನಲ್ಲಿ ಗಿಡಮರಗಳನ್ನು ಬೆಳೆಸುವುದು ಮತ್ತು ಅವುಗಳನ್ನು ನಿರ್ವಹಿಸುವುದು.

(ii) ಗ್ರಾಮ ಪಂಚಾಯತ್‌ಗಳಿಗೆ ಅಗತ್ಯವಿರುವ ಸಸಿಗಳನ್ನು ಬೆಳೆಸುವುದು ಮತ್ತು ಸಸಿಗಳು ಹಾಗೂ ಬೀಜಗಳನ್ನು ವಿತರಿಸುವುದು.

(iii) ಗ್ರಾಮ ಪಂಚಾಯತ್‌ಗಳಿಗೆ ಮೇವು ಅಭಿವೃದ್ಧಿ ಮತ್ತು ಇಂಧನ ಸ್ಥಾವರ ತಾಂತ್ರಿಕ ಜ್ಞಾನವನ್ನು ಒದಗಿಸುವುದಕ್ಕೆ ಸಂಬಂಧಿಸಿದಂತೆ ತರಬೇತಿಗಳನ್ನು, ಕಾರ್ಯಾಗಾರಗಳನ್ನು ಆಯೋಜಿಸುವುದು.

**6. ಪ್ರವಾಸೋದ್ಯಮ**

i. ತಾಲ್ಲೂಕುಗಳಲ್ಲಿರುವ ಗ್ರಾಮ ಪಂಚಾಯತ್‌ಗಳ ಒಳಗಡೆ ಪ್ರವಾಸಿ ತಾಣಗಳನ್ನು ಗುರುತಿಸುವುದು ಮತ್ತು ಅವುಗಳನ್ನು ಅಭಿವೃದ್ಧಿಪಡಿಸಲು ಪ್ರಸ್ತಾವಗಳನ್ನು ರೂಪಿಸುವುದು.

ii. ಪ್ರವಾಸೋದ್ಯಮ ಚಟುವಟಿಕೆಗಳಿಗೆ ಉತ್ತೇಜನ ನೀಡುವುದು.

iii. ತಾಲ್ಲೂಕು ಪಂಚಾಯತ್‌ಗಳಿಗೆ ವಹಿಸಿಕೊಟ್ಟಿರುವ ಪ್ರವಾಸಿ ಕೇಂದ್ರಗಳಿಗೆ ಮೂಲ ಸೌಲಭ್ಯಗಳನ್ನು ಒದಗಿಸುವುದು.

iv. ತಾಲ್ಲೂಕು ಪಂಚಾಯತ್‌ಗಳಿಗೆ ವಹಿಸಿಕೊಟ್ಟಿರುವ ಪ್ರವಾಸಿ ಆಕರ್ಷಣೆ ಕೇಂದ್ರಗಳನ್ನು ಅಭಿವೃದ್ಧಿಪಡಿಸುವುದು ಮತ್ತು ನಿರ್ವಹಿಸುವುದು.

**7. ಸಣ್ಣ ಪ್ರಮಾಣದ ಕೈಗಾರಿಕೆಗಳು ಮತ್ತು ಗ್ರಾಮೀಣ ಕೈಗಾರಿಕೆಗಳು – ಖಾದಿ, ಕರಕುಶಲ ಕಲೆಗಳು, ಆಹಾರ ಗ್ರಾಮೋದ್ಯಮಗಳು ಮತ್ತು ಸಂಸ್ಕರಣಾ ಕೈಗಾರಿಕೆಗಳು**

i. ಗುಡಿ ಕೈಗಾರಿಕೆ ಮತ್ತು ಖಾದಿ ಉದ್ಯಮಗಳು, ಕರಕುಶಲ ಕಲೆಗಳು, ಗ್ರಾಮೀಣ ಕೈಗಾರಿಕೆಗಳು, ಆಹಾರ ಸಂಸ್ಕರಣಾ ಕೈಗಾರಿಕೆಗಳು ಮತ್ತು ಇತರ ಕೃಷಿಯೇತರ ಚಟುವಟಿಕೆಗಳಿಗೆ ಸಂಬಂಧಪಟ್ಟಂತೆ ನೆರವು ನೀಡಿಕೆಯ ಕಾರ್ಯತಂತ್ರ ವ್ಯವಸ್ಥೆಯನ್ನು ಸ್ಥಾಪಿಸುವುದು.

ii. ಸಮ್ಮೇಳನಗಳು, ವಿಚಾರ ಸಂಕಿರಣಗಳು ಮತ್ತು ತರಬೇತಿ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವುದು.

iii. ಅತಿ ಸಣ್ಣ ಕೈಗಾರಿಕಾ ಘಟಕಗಳನ್ನು ಸ್ಥಾಪಿಸುವುದು.

iv. ಸ್ವಯಂ ಉದ್ಯೋಗ ಯೋಜನೆಗಳನ್ನು ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು.

v. ಗ್ರಾಮ ಪಂಚಾಯತ್ ಸಮುಚ್ಚಯಗಳಿಗೆ (ಕ್ಲಸ್ಟರುಗಳಿಗೆ) ಅಥವಾ ಗ್ರಾಮಪಂಚಾಯತ್‌ಗಳ ಗುಂಪುಗಳಿಗೆ ಪರಿಕರ ಸೇವಾ ಕೇಂದ್ರಗಳನ್ನು ಹಾಗೂ ಸಾಮಾನ್ಯ ಸೌಲಭ್ಯ ಕೇಂದ್ರಗಳನ್ನು ಸೃಜಿಸುವುದು.

vi. ಸಮುಚ್ಚಯ(ಕ್ಲಸ್ಟರ್) ಮಟ್ಟದ ಸಾಮಾನ್ಯ ಸೌಲಭ್ಯ ಕೇಂದ್ರಗಳಿಗೆ ಹಣಕಾಸಿನ ನೆರವನ್ನು ಒದಗಿಸುವುದು

vii. ಬ್ಲಾಕ್‌ನಲ್ಲಿ ಅಥವಾ ಹೋಬಳಿ ಮಟ್ಟದಲ್ಲಿ ಇರುವ ಸಾಮಾನ್ಯ ಸೌಲಭ್ಯ ಕೇಂದ್ರಗಳನ್ನು ನಿರ್ವಹಿಸುವುದು

**8. ಗ್ರಾಮೀಣ ವಸತಿ**

i. ಗ್ರಾಮಠಾಣಾ ಎಲ್ಲೆಗಳ ಹೊರಗೆ ವಸತಿ ಯೋಜನೆಯನ್ನು ಅನುಷ್ಠಾನಗೊಳಿಸುವುದು ಮತ್ತು ನಿವೇಶನಗಳನ್ನು ವಿತರಿಸುವುದು.

ii. ಕಡಿಮೆ ವೆಚ್ಚದ ಗೃಹ ನಿರ್ಮಾಣಕ್ಕೆ ಸಂಬಂಧಿಸಿದ ಸಮರ್ಪಕ ತಂತ್ರಜ್ಞಾನಗಳನ್ನು ಅಳವಡಿಸಿಕೊಳ್ಳುವುದು ಮತ್ತು ಅವುಗಳನ್ನು ಗ್ರಾಮ ಪಂಚಾಯತ್‌ಗಳಿಗೆ ಪ್ರಚುರಪಡಿಸುವುದು.

iii. ಗ್ರಾಮ ಪಂಚಾಯತ್‌ಗಳಿಗೆ ತಾಂತ್ರಿಕ ನೆರವನ್ನು ಮತ್ತು ಪರಿಕರಗಳನ್ನು ಒದಗಿಸುವುದು.

iv. ತಾಲ್ಲೂಕು ಮಟ್ಟದ ಗೃಹನಿರ್ಮಾಣ ಸಹಕಾರ ಸಂಘಗಳಿಗೆ ಉತ್ತೇಜನ ನೀಡುವುದು

**9. ಕುಡಿಯುವ ನೀರು ಪೂರೈಕೆ**

i. ನೀರನ್ನು ಮಲಿನಗೊಳಿಸುವುದನ್ನು ತಡೆಯುವುದು ಮತ್ತು ನಿಯಂತ್ರಿಸುವುದು.

ii. ಗ್ರಾಮ ಪಂಚಾಯತ್‌ಗಳಿಗೆ ಹೊರಗೆ ಕುಡಿಯುವ ನೀರು ಪೂರೈಕೆಗೆ ವ್ಯವಸ್ಥೆಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು.

iii. ಕುಡಿಯುವ ನೀರು ಪೂರೈಕೆಯ ಯೋಜನೆಯನ್ನು ಅನುಷ್ಠಾನಗೊಳಿಸುವುದಕ್ಕೆ ಗ್ರಾಮ ಪಂಚಾಯತಿಗಳಿಗೆ ಪರಿಕರಗಳನ್ನು ಮತ್ತು ತಾಂತ್ರಿಕ ನೆರವನ್ನು ಒದಗಿಸುವುದು.

**10. ಲೋಕೋಪಯೋಗಿ ಕಾಮಗಾರಿಗಳು, ಪಟ್ಟಣ ಮತ್ತು ಗ್ರಾಮಾಂತರ ಯೋಜನೆ (ರಸ್ತೆಗಳು, ಸೇತುವೆಗಳು, ಹಾಯ್ಗಡಗಳು, ಜಲ ಮಾರ್ಗಗಳು ಮತ್ತು ಇತರ ಸಂಪರ್ಕ ಮಾರ್ಗಗಳು)**

(i) ಯಾವುದೇ ಸ್ಥಳೀಯ ಪ್ರಾಧಿಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ನಿಯಂತ್ರಣದಲ್ಲಿರದ ಬಹು ಗ್ರಾಮ ಪಂಚಾಯತ್ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ

(ಎ) ರಸ್ತೆಗಳು

(ಬಿ) ಪಾದಚಾರಿ ಮಾರ್ಗಗಳಿಗೆ/ ಓಣಿಗಳಿಗೆ

(ಸಿ) ತಾಲ್ಲೂಕು ರಸ್ತೆಗಳಿಗೆ

(ಡಿ) ಸೇತುವೆಗಳಿಗೆ/ಸುರಂಗ ಕಾಲುವೆಗಳಿಗೆ (ಕಲ್ವರ್ಟ್ಸ್)

(ಇ) ಕಟ್ಟಡಗಳಿಗೆ

(ಎಫ್) ಚರಂಡಿಗಳಿಗೆ

(ಜಿ) ರಾಜ್ಯ ಅಥವಾ ಕೇಂದ್ರ ಸರ್ಕಾರದ ನಿಯಂತ್ರಣದಲ್ಲಿರುವ ಯಾವುದೇ ಇತರ ಸ್ಥಳೀಯ ಪ್ರಾಧಿಕಾರಗಳ ನಿಯಂತ್ರಣದ ಅಡಿಯಲ್ಲಿ ಬಾರದಿರುವುದು

(ii) ತಾಲ್ಲೂಕು ಪಂಚಾಯತ್‌ಗಳ ನಿಯಂತ್ರಣಕ್ಕೆ ಒಳಪಡುವ ಬಹು ಗ್ರಾಮ ಪಂಚಾಯತ್‌ಗಳ ವ್ಯಾಪ್ತಿಯ ಒಳಗೆ ದೋಣಿಗಳು, ತೆಪ್ಪಗಳು (ಫ್ಲೆರ್ರಿಗಳು) ಮತ್ತು ಜಲಮಾರ್ಗಗಳನ್ನು ನಿರ್ವಹಿಸುವುದು.

(iii) ತಾಲ್ಲೂಕು ಪಂಚಾಯತಿ ನಿಯಂತ್ರಣಕ್ಕೆ ಒಳಪಟ್ಟ ಪ್ರೌಢಶಾಲಾ ಕಟ್ಟಡಗಳಿಗೆ, ತಾಲ್ಲೂಕು ಆಸ್ಪತ್ರೆಗಳಿಗೆ ಮತ್ತು ಇತರ ತಾಲ್ಲೂಕು ಮಟ್ಟದ ಸಾರ್ವಜನಿಕ ಸಂಸ್ಥೆಗಳಿಗೆ ಯೋಜನೆ ರೂಪಿಸುವುದು, ಅವುಗಳ ನಿರ್ಮಾಣ ಮಾಡುವುದು ಮತ್ತು ಅವುಗಳನ್ನು ನಿರ್ವಹಿಸುವುದು.

**11. ಗ್ರಾಮೀಣ ವಿದ್ಯುದೀಕರಣ/ವಿದ್ಯುತ್ ಮತ್ತು ಇಂಧನ**

i. ಪ್ರಮುಖ ಬೆಳೆ ಹಂಗಾಮುಗಳಲ್ಲಿ ಮತ್ತು ವಿಶೇಷ ಸಂದರ್ಭಗಳಲ್ಲಿ ಗುಣಮಟ್ಟದ ಮತ್ತು ನಿರಂತರವಾಗಿ ವಿದ್ಯುತ್ ಪೂರೈಕೆ ಸಾಧ್ಯವಾಗುವಂತೆ ಮಾಡುವ ದೃಷ್ಟಿಯಿಂದ ವಿದ್ಯುತ್ ಪೂರೈಕೆ ಏಜೆನ್ಸಿಗಳೊಂದಿಗೆ ಸಮನ್ವಯ.

ii. ಸಮರ್ಪಕ ಶ್ರೇಣಿಯ ಸಾಂಪ್ರದಾಯಿಕ ಮತ್ತು ಸಾಂಪ್ರದಾಯಿಕವಲ್ಲದ ಇಂಧನ ಘಟಕಗಳ ಕುರಿತು ಯೋಜನೆ ರೂಪಿಸುವುದು ಅವುಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು.

iii. ಸಾಂಪ್ರದಾಯಿಕ ಮತ್ತು ಸಾಂಪ್ರದಾಯಿಕವಲ್ಲದ ಇಂಧನವನ್ನು ಇತರರಿಗೆ ಮಾರಾಟ ಮಾಡುವುದು.

**12. ಬಡತನ ನಿರ್ಮೂಲನೆ**

(i) ಬಡತನ ನಿರ್ಮೂಲನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯತ್‌ಗಳಿಗೆ ತಾಂತ್ರಿಕ ಪರಿಕರಗಳನ್ನು ಒದಗಿಸುವುದು.

(ii) ತಾಲ್ಲೂಕು ಮಟ್ಟದಲ್ಲಿ ಸ್ವಯಂ ಉದ್ಯೋಗ ಕಾರ್ಯಕ್ರಮಗಳನ್ನು ಕೈಗೊಳ್ಳುವುದು, ಜೆಎಲ್‌ಜಿ ಗಳು ಮತ್ತು ವೈಯಕ್ತಿಕ ಹಾಗೂ ಸರ್ಕಾರದ ಎಲ್ಲಾ ಕಾರ್ಯಕ್ರಮಗಳಲ್ಲಿ ಸ್ವ–ಸಹಾಯ ಸಮೂಹಗಳಿಗೆ ಸಂಪರ್ಕವನ್ನು ಕಲ್ಪಿಸುವುದು.

**13. ಸಾರ್ವಜನಿಕ ವಿತರಣಾ ವ್ಯವಸ್ಥೆ (ಪಿಡಿಎಸ್)**

ಅತ್ಯಾವಶ್ಯಕ ಸರಕುಗಳನ್ನು ವಿತರಿಸುವುದು.

**14. ವಿಪತ್ತು ನಿರ್ವಹಣೆ**

ವಿಪತ್ತು ನಿರ್ವಹಣಾ ಕಾರ್ಯಕ್ರಮಗಳಲ್ಲಿ ಗ್ರಾಮ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿ ಮಟ್ಟದ ಕಾರ್ಯನಿರ್ವಹಣಾ ಸಿಬ್ಬಂದಿಗೆ ತರಬೇತಿಗಳನ್ನು ನಡೆಸುವುದು.

15. **ಶಿಕ್ಷಣ [ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಣ, ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣ, ವಯಸ್ಕರ ಹಾಗೂ ಅನೌಪಚಾರಿಕ ಶಿಕ್ಷಣ]**

(i) ವಯಸ್ಕರ ಶಿಕ್ಷಣವನ್ನು ಪ್ರೋತ್ಸಾಹಿಸುವುದು.

(ii) ತಾಲ್ಲೂಕು ಮಟ್ಟದಲ್ಲಿ ಸಾಂಪ್ರದಾಯಿಕ ಮತ್ತು ಸಾಂಪ್ರದಾಯಿಕವಲ್ಲದ ಈ ಎರಡು ರೀತಿಯ ಶಿಕ್ಷಣ ನೀಡುವುದನ್ನು ಯೋಜನೆ ರೂಪಿಸುವುದು ಮತ್ತು ಮೇಲ್ವಿಚಾರಣೆ ಮಾಡುವುದು.

(iii) ಪ್ರೌಢ ಶಾಲೆಗಳನ್ನು ಆರಂಭಿಸುವುದಕ್ಕೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರಕ್ಕೆ ಪ್ರಸ್ತಾವನೆಗಳನ್ನು ಕಳುಹಿಸುವುದು ಮತ್ತು ಮಂಜೂರಾತಿಗಳನ್ನು ಪಡೆದುಕೊಳ್ಳುವುದು.

(iv) ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೇಂದ್ರ ಮತ್ತು ರಾಜ್ಯ ಪ್ರಾಯೋಜಿತ ಕಾರ್ಯಕ್ರಮಗಳನ್ನು ಸಂಯೋಜಿಸುವುದು.

(v) ತಾಲ್ಲೂಕು ಮಟ್ಟದಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕಟ್ಟಡಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು.

(vi) ಗ್ರಾಮ ಪಂಚಾಯಿತಿ ಮಟ್ಟದಲ್ಲಿನ ಶಾಲೆಗಳಿಗೆ ಪುಸ್ತಕಗಳು, ಅಧ್ಯಯನ ಸಾಮಗ್ರಿಗಳು, ತರಬೇತಿ ಹೂಡುವಳಿ ರೂಪಗಳಂಥ ಅಗತ್ಯ ನೆರವನ್ನು ಒದಗಿಸುವುದು.

(vii) ಯುವ ಕ್ಲಬ್‌ಗಳು ಮತ್ತು ಮಹಿಳಾ ಮಂಡಳಿಗಳ ಮೂಲಕ ಸಾಮಾಜಿಕ ಶಿಕ್ಷಣವನ್ನು ಉತ್ತೇಜಿಸುವುದು.

(viii) ಹಿಂದುಳಿದ ವರ್ಗಗಳು ಮತ್ತು ಸಮೂಹಗಳು, ಬಾಲಕಿಯರು, ವಿಶೇಷ ಚೇತನ ಮಕ್ಕಳು ಮತ್ತು ಅಲ್ಪಸಂಖ್ಯಾತ ಸಮೂಹಗಳ ಮಕ್ಕಳಿಗೆ ಹಾಗೂ ಅನಾಥ ಮಕ್ಕಳಿಗೆ ಪ್ರಾಥಮಿಕ ಶಾಲೆಯ ಹಂತದಲ್ಲಿ ಆಶ್ರಮ ಶಾಲೆಗಳು, ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದನ್ನು ಕುರಿತು ಯೋಜನೆ ರೂಪಿಸುವುದು, ಸ್ಥಾಪಿಸುವುದು ಮತ್ತು ನಿರ್ವಹಿಸುವುದು.

**16. ಗ್ರಂಥಾಲಯಗಳು**

(i) ತಾಲ್ಲೂಕು ಮಟ್ಟದ ಗ್ರಂಥಾಲಯಗಳು ಮತ್ತು ವಾಚನಾಲಯಗಳನ್ನು ಸ್ಥಾಪಿಸುವುದನ್ನು ಕುರಿತು ಯೋಜನೆಯನ್ನು ಸೂಚಿಸುವುದು ಮತ್ತು ಮೇಲ್ವಿಚಾರಣೆ ಮಾಡುವುದು.

(ii) ಗ್ರಂಥಾಲಯಗಳನ್ನು ಮೇಲ್ದರ್ಜೆಗೇರಿಸುವುದು.

**17. ಕ್ರೀಡೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು**

(i) ಗ್ರಾಮೀಣ ಕುಶಲ ಕರ್ಮಿ ಮತ್ತು ವೃತ್ತಿ ತರಬೇತಿಯನ್ನು ಉತ್ತೇಜಿಸುವುದು.

(ii) ಯುವಜನತೆ ತಮ್ಮ ಪ್ರತಿಭೆಯನ್ನು ಪ್ರದರ್ಶಿಸುವುದೂ ಸೇರಿದಂತೆ, ಸಾಂಸ್ಕೃತಿಕ ತಂಡಗಳು ತಮ್ಮ ಪ್ರತಿಭೆ ಮತ್ತು ಕಲೆಗಳನ್ನು ಪ್ರದರ್ಶಿಸುವುದಕ್ಕೆ ಸಂಬಂಧಿಸಿದಂತೆ ವೇದಿಕೆಯನ್ನು ಕಲ್ಪಿಸುವುದು.

(iii) ತಾಲ್ಲೂಕು ಮಟ್ಟದಲ್ಲಿ ಯುವ ಮೇಳಗಳನ್ನು ಏರ್ಪಡಿಸುವುದು.

(iv) ಯುವಜನತೆಗಾಗಿ ತಾಲ್ಲೂಕು ಮಟ್ಟದ ಯುವಕ ಕೇಂದ್ರವನ್ನು ಸ್ಥಾಪಿಸುವುದು.

(v) ತಾಲ್ಲೂಕು ಮಟ್ಟದಲ್ಲಿ ಕ್ರೀಡಾಂಗಣಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು.

18. **ಮಾರುಕಟ್ಟೆಗಳು, ಪರಿಷೆಗಳು ಮತ್ತು ದನಗಳ ಜಾತ್ರೆಗಳು**

(i) ತಾಲ್ಲೂಕು ಮಟ್ಟದ ಸಾರ್ವಜನಿಕ ಮಾರುಕಟ್ಟೆಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು.

(ii) ದನದ ಜಾತ್ರೆಗಳನ್ನು ಒಳಗೊಂಡಂತೆ ತಾಲ್ಲೂಕು ಮಟ್ಟದಲ್ಲಿ ಪರಿಷೆಗಳು, ಉತ್ಸವಗಳನ್ನು ಮತ್ತು ನಡೆಸುವುದಕ್ಕೆ ಸಂಬಂಧಿಸಿದಂತೆ ವಿನಿಯಮಗಳನ್ನು ರೂಪಿಸುವುದು.

(iii) ಸ್ವಸಹಾಯ ಗುಂಪುಗಳು ಮತ್ತು ಜೆಎಲ್‌ಜಿಗಳು ಮೂಲಭೂತ ಸೌಕರ್ಯಗಳನ್ನು ಸೃಜಿಸುವುದು ಮತ್ತು ಅವುಗಳ ಉತ್ಪನ್ನಗಳ ಮಾರಾಟಕ್ಕೆ ಉತ್ತೇಜನ ನೀಡುವುದು

**19. ಸಾರ್ವಜನಿಕ ಆರೋಗ್ಯ (ಆಸ್ಪತ್ರೆಗಳು, ಪ್ರಾಥಮಿಕ ಆರೋಗ್ಯ ಕೇಂದ್ರಗಳೂ ಸೇರಿದಂತೆ) ಮತ್ತು ಕುಟುಂಬ ಕಲ್ಯಾಣ**

(i) ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು ತಾಲ್ಲೂಕು ಆಸ್ಪತ್ರೆಗಳನ್ನು ಸ್ಥಾಪಿಸುವುದಕ್ಕೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರಕ್ಕೆ ಪ್ರಸ್ತಾವಗಳನ್ನು ಕಳುಹಿಸುವುದು ಮತ್ತು ಮಂಜೂರಾತಿಗಳನ್ನು ಪಡೆದುಕೊಳ್ಳುವುದು.

(ii) ಪ್ರತಿರಕ್ಷಣೆ ಮತ್ತು ಚುಚ್ಚುಮದ್ದು ಕಾರ್ಯಕ್ರಮಗಳನ್ನು ಉತ್ತೇಜಿಸುವುದು.

(iii) ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು ತಾಲ್ಲೂಕು ಆಸ್ಪತ್ರೆಗಳ ಮೇಲ್ವಿಚಾರಣೆ ಮಾಡುವುದು.

(iv) ಆರೋಗ್ಯ ಸೇವೆಗಳು ಮತ್ತು ನೈರ್ಮಲ್ಯ ಕಾರ್ಯಕ್ರಮಗಳನ್ನು ನಿರ್ವಹಿಸುವುದಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಗಳಿಗೆ ನಿರಂತರವಾದ ನೆರವು ನೀಡುವುದಕ್ಕಾಗಿ ವ್ಯವಸ್ಥೆಯನ್ನು ಕಲ್ಪಿಸುವುದು.

(v) ವಿಶೇಷ ವರ್ಗಗಳಿಗೆ ವಿಶೇಷ ಚೇತನರಿಗೆ ಹಾಗೂ ಮಾನಸಿಕ ವಿಕಲತೆಯುಳ್ಳವರಿಗೆ ಸಂಬಂಧಿಸಿದಂತೆ ಸೌಲಭ್ಯಗಳನ್ನು ಒದಗಿಸುವುದು ಮತ್ತು ಕೇಂದ್ರಗಳನ್ನು ಸ್ಥಾಪಿಸುವುದು.

(vi) ತಾಲ್ಲೂಕು ಮಟ್ಟದಲ್ಲಿ ಪ್ರಯೋಗಾಲಯಗಳು ಮತ್ತು ರೋಗ ಪರಿಶೋಧನಾ ಸೇವೆಗಳ ಮೇಲ್ವಿಚಾರಣೆ ಮಾಡುವುದು ಹಾಗೂ ಅವುಗಳನ್ನು ಗ್ರಾಮ ಪಂಚಾಯಿತಿಗಳಿಗೆ ಒದಗಿಸುವುದು.

(vii) ತಾಲ್ಲೂಕು ಪಂಚಾಯಿತಿ ಮಟ್ಟದಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮಗಳನ್ನು ಕುರಿತು ಯೋಜನೆ ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು.

**20. ನೈರ್ಮಲ್ಯ**

(i) ಜಾತ್ರೆಗಳು ಮತ್ತು ಉತ್ಸವಗಳಲ್ಲಿ ಆರೋಗ್ಯ ಮತ್ತು ನೈರ್ಮಲ್ಯಕ್ಕೆ ಪ್ರೋತ್ಸಾಹಿಸುವುದು.

(ii) ಬಹುಗ್ರಾಮ ಘನತ್ಯಾಜ್ಯ ಮತ್ತು ದ್ರವ್ಯ ತ್ಯಾಜ್ಯ ಸ್ಥಾವರಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು.

(iii) ಗ್ರಾಮ ಪಂಚಾಯಿತಿಗಳಿಗೆ ತಾಂತ್ರಿಕವಾದ ನೆರವು ನೀಡುವುದು.

**21. ಮಹಿಳಾ ಮತ್ತು ಮಕ್ಕಳ ಕಲ್ಯಾಣ, ವಿಶೇಷ ಚೇತನ ಮತ್ತು ಮಾನಸಿಕ ಸವಾಲುಗಳುಳ್ಳವರ ಕಲ್ಯಾಣ**

(i) ತಾಲ್ಲೂಕು ಮಟ್ಟದಲ್ಲಿ ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆಯನ್ನು ಕುರಿತು ಯೋಜನೆ ರೂಪಿಸುವುದು, ಅನುಷ್ಠಾನಗೊಳಿಸುವುದು ಮತ್ತು ನಿರ್ವಹಿಸುವುದು.

(ii) ತಾಲ್ಲೂಕು ಮಟ್ಟದಲ್ಲಿ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಮತ್ತು ಸಬಲೀಕರಣಕ್ಕೆ ಸಂಬಂಧಪಟ್ಟ ಕಾರ್ಯಕ್ರಮಗಳಿಗೆ ಉತ್ತೇಜನ ನೀಡುವುದು, ಅನುಷ್ಠಾನಗೊಳಿಸುವುದು ಮತ್ತು ಮೇಲ್ವಿಚಾರಣೆ ಮಾಡುವುದು.

(iii) ಶಾಲಾ ಆರೋಗ್ಯ ಮತ್ತು ಪೌಷ್ಠಿಕ ಆಹಾರ ಕಾರ್ಯಕ್ರಮಗಳಿಗೆ ಉತ್ತೇಜನವನ್ನು ನೀಡುವುದು ಮತ್ತು ಮೇಲ್ವಿಚಾರಣೆ ಮಾಡುವುದು.

**22. ಅನುಸೂಚಿತ ಜಾತಿಗಳು, ಅನುಸೂಚಿತ ಪಂಗಡಗಳು ಮತ್ತು ಇತರೆ ಹಿಂದುಳಿದ ವರ್ಗಗಳ ಜಾತಿಗಳ ಅಭಿವೃದ್ಧಿ**

(i) ತಾಲ್ಲೂಕು ಮಟ್ಟದಲ್ಲಿ ಮತ್ತು ಕೆಳಮಟ್ಟದಲ್ಲಿ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡದವರು ಮತ್ತು ಹಿಂದುಳಿದ ಸಮುದಾಯಗಳಿಗೆ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದಕ್ಕೆ ಸಂಬಂಧಿಸಿದಂತೆ ಯೋಜನೆಯನ್ನು ರೂಪಿಸುವುದು ಮತ್ತು ನಿರ್ವಹಿಸುವುದು.

(ii) ಮೆಟ್ರಿಕ್‌ಪೂರ್ವ ವಸತಿ ನಿಲಯಗಳನ್ನು ಸ್ಥಾಪಿಸುವುದನ್ನು ಕುರಿತು ಯೋಜನೆ ರೂಪಿಸುವುದು ಮತ್ತು ನಿರ್ವಹಿಸುವುದು.

(iii) ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸಂಬಂಧಪಟ್ಟಂತೆ ವ್ಯಕ್ತಿ ಮತ್ತು ಸಮುದಾಯದ ಸ್ವಾತಂತ್ರ್ಯ ಮತ್ತು ಘನತೆಗೆ ಕುಂದುಂಟು ಮಾಡುವಂಥ ಪದ್ಧತಿಗಳನ್ನು ಸಾಮಾಜಿಕ, ಸಾಂಸ್ಕೃತಿಕ ರೂಢಿಗಳನ್ನು ಅನುಸರಿಸುವುದನ್ನು ತಡೆಗಟ್ಟುವುದು.

(iv) ವೃದ್ಧಾಪ್ಯ ಪಿಂಚಣಿ, ವಿಧವಾ ಪಿಂಚಣಿ ಮತ್ತು ಅಂಗವಿಕಲರ ಪಿಂಚಣಿಗಳ ಮೇಲ್ವಿಚಾರಣೆ ಮಾಡುವುದು

(v) ಅಂಗವಿಕಲ, ಮಾನಸಿಕ ಅಸ್ವಸ್ಥ ಹಾಗೂ ನಿರ್ಗತಿಕರ ಕಲ್ಯಾಣವನ್ನು ಒಳಗೊಂಡಂತೆ ಸಮಾಜ ಕಲ್ಯಾಣ ಕಾರ್ಯಕ್ರಮಗಳು.

**23. ಜಾನುವಾರು ಸಾಕಾಣಿಕೆ ಕೇಂದ್ರಗಳು, ಕಾರು/ ಆಟೋ/ ರಿಕ್ಷಾ ಮತ್ತು ಬಸ್ ನಿಲ್ದಾಣಗಳ ನಿರ್ಮಾಣಗಳು ಹಾಗೂ ಎತ್ತಿನ ಗಾಡಿ ನಿಲ್ದಾಣಗಳ ನಿರ್ಮಾಣ ಮತ್ತು ನಿರ್ವಹಣೆ**

ಇತರ ಸ್ಥಳೀಯ ಸಂಸ್ಥೆಗಳ ಪುರಸಭಾ ಪರಿಮಿತಿಯ ಹೊರಗೆ ತಾಲ್ಲೂಕು ಬಸ್ ನಿಲ್ದಾಣಗಳು, ಕಾರು/ ಆಟೋರಿಕ್ಷಾ ಹಾಗೂ ಬಸ್ ನಿಲ್ದಾಣಗಳು, ಎತ್ತಿನಗಾಡಿ ನಿಲ್ದಾಣಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು.

**24. ಅಂಕಿಅಂಶಗಳ ನಿರ್ವಹಣೆ**

ತಾಲ್ಲೂಕು ಅಂಕಿಅಂಶಗಳನ್ನು ಕ್ರೋಢೀಕರಿಸುವುದು.

**25. ಯೋಜನೆ**

(i) ಗ್ರಾಮ ಪಂಚಾಯಿತಿಗಳಿಂದ ಸ್ವೀಕರಿಸುವ ಯೋಜನೆಗಳನ್ನು ಕ್ರೋಢೀಕರಿಸುವುದು, ತಾಲ್ಲೂಕು ಮಟ್ಟದ ಯೋಜನೆಗಳನ್ನು ಸಿದ್ಧಪಡಿಸುವುದು, ಅಂಗೀಕರಿಸುವುದು ಮತ್ತು ಜಿಲ್ಲಾ ಪಂಚಾಯತಿಗೆ ಅದನ್ನು ಸಲ್ಲಿಸುವುದಕ್ಕೆ ಸಂಬಂಧಿಸಿದಂತೆ ತಾಲ್ಲೂಕು ಯೋಜನಾ ಸಮಿತಿಯನ್ನು ರಚಿಸುವುದು.

(ii) ಅಂಕಿಅಂಶಗಳು ಮತ್ತು ಮಾಹಿತಿ ಸಂಗ್ರಹಣೆಗೆ ಹಾಗೂ ಯೋಜನೆ ರೂಪಿಸುವುದುಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಗಳಿಗೆ ತಂತ್ರಜ್ಞರ ನೆರವನ್ನು ಒದಗಿಸುವುದು.

(iii) ಸಮಾಜ ಘಟಕಾಂಶ ಯೋಜನೆಗಳು (ಎಸ್‌ಸಿಪಿಗಳು)/ ಬುಡಕಟ್ಟು ಉಪಯೋಜನೆಗಳು (ಟಿಎಸ್‌ಪಿಗಳು) ಸೇರಿದಂತೆ ಸರ್ಕಾರದ ಎಲ್ಲಾ ಕಾರ್ಯಕ್ರಮಗಳ ಪ್ರಗತಿ ಕುರಿತು ಮತ್ತು ಮೇಲ್ವಿಚಾರಣೆ ಮಾಡುವುದು ಮತ್ತು ಅವುಗಳ ಗುಣಮಟ್ಟದ ಅನುಷ್ಠಾನವನ್ನು ಖಚಿತಪಡಿಸಿಕೊಳ್ಳುವುದು.

**26. ಸಹಕಾರ**

ಬ್ಲಾಕ್ ಅಥವಾ ತಾಲ್ಲೂಕು ಮಟ್ಟದ ಎಲ್ಲಾ ಸಹಕಾರ ಸಂಘಗಳಿಗೆ ಉತ್ತೇಜನ ನೀಡುವುದಕ್ಕೆ ಅಗತ್ಯವಿರುವ ಸೌಲಭ್ಯ ಒದಗಿಸುವುದು.

**27. ಗ್ರಾಮೀಣ ಪರಿಸರ ಮತ್ತು ಜೀವಿ ಪರಿಸ್ಥಿತಿ**

ಗ್ರಾಮೀಣ ಪರಿಸರ ಮತ್ತು ಜೀವಿ ಪರಿಸ್ಥಿತಿಯ ಸಂರಕ್ಷಣೆಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಗಳಿಗೆ ಅಗತ್ಯವಿರುವ ತಾಂತ್ರಿಕ ನೆರವನ್ನು ಒದಗಿಸುವುದು.

**28. ಆದಾಯೋತ್ಪತ್ತಿ ಚಟುವಟಿಕೆಗಳು**

ತಾಲ್ಲೂಕು ಕೇಂದ್ರ ಕಾರ್ಯಸ್ಥಳದಲ್ಲಿ ಆಸ್ತಿಗಳನ್ನು ಸೃಜಿಸುವುದು ಮತ್ತು ಅವುಗಳನ್ನು ಬಾಡಿಗೆ ನೀಡುವುದು.

**29. ಜ್ಞಾನ ನಿರ್ವಹಣೆ**

(i) ತಾಲ್ಲೂಕಿಗೆ ಸಂಬಂಧಿಸಿದ ಅಂಕಿಅಂಶಗಳನ್ನು ಸಂಗ್ರಹಿಸುವುದು ಮತ್ತು ಕ್ರೋಢೀಕರಿಸುವುದು ಮತ್ತು ಅಂಕಿಅಂಶಗಳ ಕಣಜವನ್ನು (ಡೇಟಾಬೇಸ್) ನಿರ್ವಹಿಸುವುದು.

(ii) ತಾಲ್ಲೂಕಿನ ಇತಿಹಾಸ, ಸಂಸ್ಕೃತಿ ಮತ್ತು ಪರಂಪರೆಯನ್ನು ದಾಖಲಿಸುವುದು.

(iii) ತಾಲ್ಲೂಕಿನ ಮಾನವ ಅಭಿವೃದ್ಧಿ ನಿರ್ಧರಿಸಲಿಕ್ಕೆ ಸಂಬಂಧಿಸಿದಂತೆ ಸಮೀಕ್ಷೆಗಳು ಮತ್ತು ಅಧ್ಯಯನಗಳನ್ನು ನಡೆಸುವುದು.

(iv) ಮಾನವಾಭಿವೃದ್ಧಿ ಸೂಚ್ಯಂಕದ ನಿಯತಕಾಲಿಕ ಗಣನೆ ಮಾಡುವುದು.

(v) ಎಲ್ಲಾ ದತ್ತಾಂಶಗಳು ಜನರಿಗೆ ದೊರೆಯುವಂತೆ ಮಾಡುವುದು.

(vi) ಸರ್ಕಾರದ ಎಲ್ಲಾ ಯೋಜನೆಗಳನ್ನು ಕುರಿತು ಜಾಗೃತಿ ಮೂಡಿಸುವುದು ಮತ್ತು ಮಾಹಿತಿ, ಶಿಕ್ಷಣ ಮತ್ತು ಸಂಪರ್ಕ ಚಟುವಟಿಕೆಗಳನ್ನು ಕೈಗೊಳ್ಳುವುದು.

**30. ಸಮುದಾಯ ಸ್ವತ್ತುಗಳ ನಿರ್ವಹಣೆ**

(i) ತಾಲ್ಲೂಕು ಪಂಚಾಯಿತಿಯಲ್ಲಿ ಅಥವಾ ಸರ್ಕಾರದಿಂದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ಸಂಸ್ಥೆಯಿಂದ ವರ್ಗಾವಣೆಯಾದ ಎಲ್ಲಾ ಸಮುದಾಯ ಸ್ವತ್ತುಗಳ ನಿರ್ವಹಣೆ

(ii) ಇತರ ಸಮುದಾಯ ಸ್ವತ್ತುಗಳ ಸಂರಕ್ಷಣೆ ಮತ್ತು ನಿರ್ವಹಣೆ

## ಅನುಸೂಚಿ –III

(184ನೇ **ಪ್ರಕರಣವನ್ನು ನೋಡಿ**)

### ಸಾಮಾನ್ಯ

ಅನುಸೂಚಿ–IIIರಲ್ಲಿ ನಿರೂಪಿಸಿರುವ ವಿಷಯಗಳಿಗೆ ಸಂಬಂಧಪಟ್ಟಂತೆ ಜಿಲ್ಲಾ ಪಂಚಾಯತಿಯ ಬಳಿ ಖರ್ಚು ಮಾಡುವುದಕ್ಕೆ ಲಭ್ಯವಿರುವ ಜಿಲ್ಲಾ ಪಂಚಾಯತಿ ನಿಧಿಗಳಿಗೆ ಸಂಬಂಧಿಸಿರುವಷ್ಟರಮಟ್ಟಿಗೆ, ಜಿಲ್ಲಾ ಪಂಚಾಯತಿಗೆ ಸಂಬಂಧಪಟ್ಟಂತೆ ರೂಪಿಸಿರುವ ಕಾರ್ಯಚಟುವಟಿಕೆ ನಕ್ಷೆಯಲ್ಲಿ ವಿವರಿಸಿರುವಂತೆ ಜಿಲ್ಲಾ ಪಂಚಾಯತಿ ಪ್ರದೇಶದ ಅಗತ್ಯತೆಗಳನ್ನು ಈಡೇರಿಸುವುದು ಜಿಲ್ಲಾ ಪಂಚಾಯತಿಗಳ ಕರ್ತವ್ಯವಾಗಿರತಕ್ಕದ್ದು.

ಈ ಅಧಿನಿಯಮದ ಇತರ ಉಪಬಂಧಗಳಿಗೆ ಮತ್ತು ಸರ್ಕಾರದ ನಿರ್ದೇಶನಗಳಿಗೆ ಒಳಪಟ್ಟು ಜಿಲ್ಲಾ ಪಂಚಾಯತಿಯು, ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ ಸಾಧನೆಗಾಗಿ, ಅನುಸೂಚಿ–IIIರಲ್ಲಿ ನಿರೂಪಿಸಿರುವ ವಿಷಯಗಳನ್ನು ನಿರ್ವಹಿಸುವ ಹಾಗೂ ಅವುಗಳಲ್ಲಿ ನಿರ್ದಿಷ್ಟಪಡಿಸಿರುವ ವಿಷಯಗಳಿಗೆ ಸಂಬಂಧಿಸಿದಂತೆ ಸ್ಕೀಮುಗಳನ್ನು ಸಿದ್ಧಪಡಿಸುವ ಮತ್ತು ಅನುಷ್ಠಾನಗೊಳಿಸುವ ಅಧಿಕಾರ ಹೊಂದಿರತಕ್ಕದ್ದು.

**1. ಸಾಮಾನ್ಯ ಪ್ರಕಾರ್ಯಗಳು**

ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಅಭಿವೃದ್ಧಿ ಸ್ಕೀಮುಗಳನ್ನು ಮೇಲ್ವಿಚಾರಿಸುವುದು, ಸಮನ್ವಯ ಮಾಡುವುದು ಒಟ್ಟುಗೂಡಿಸುವುದು ಹಾಗೂ ಜಿಲ್ಲೆಯ ಅಭಿವೃದ್ಧಿಗಾಗಿ ಯೋಜನೆಯನ್ನು ಸಿದ್ಧಪಡಿಸುವುದು.

**2. ಕೃಷಿ, ತೋಟಗಾರಿಕೆ ಮತ್ತು ರೇಷ್ಮೆ ಕೃಷಿ:**

(i) ಕೃಷಿ ಮತ್ತು ತೋಟಗಾರಿಕೆಯ ಉತ್ಪಾದನೆಯ ಹೆಚ್ಚಳ, ಮಾರುಕಟ್ಟೆ ಹಾಗೂ ಜೈವಿಕ ತಂತ್ರಜ್ಞಾನ ಅಳವಡಿಸಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಮೂಲಸೌಕರ್ಯ ಅಭಿವೃದ್ಧಿಪಡಿಸುವುದು

(ii) ಒಂದಕ್ಕಿಂತ ಹೆಚ್ಚು ತಾಲ್ಲೂಕು ಪಂಚಾಯತಿ ಪ್ರದೇಶವನ್ನು ಒಳಗೊಂಡಿರುವ ಜಲಾನಯನ ಪ್ರದೇಶಗಳಿಗೆ ಸಂಯೋಜಿತ ಜಲಾನಯನ ಪ್ರದೇಶವನ್ನು ನಿರ್ವಹಿಸುವುದು

(iii) ಕೃಷಿ ಮತ್ತು ತೋಟಗಾರಿಕೆ ಫಾರ್ಮ್‌ಗಳು ಹಾಗೂ ವಾಣಿಜ್ಯ ಫಾರ್ಮ್‌ಗಳನ್ನು ಆರಂಭಿಸುವುದು ಮತ್ತು ನಿರ್ವಹಿಸುವುದು

(iv) ಹಣಕಾಸು, ನೀರು, ಬೀಜಗಳು ಮತ್ತು ಗೊಬ್ಬರಗಳಂಥ ಕೃಷಿ ಹೂಡುವಳಿಗಳನ್ನು ಒದಗಿಸುವುದು

(v) ಗೋದಾಮುಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು

(vi) ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ವ್ಯವಸ್ಥೆ ಒದಗಿಸುವುದು, ಕೃಷಿ ಮೇಳಗಳು ಮತ್ತು ಪ್ರದರ್ಶನಗಳನ್ನು ನಡೆಸುವುದು.

(vii) ನೂತನ ಕೃಷಿ ಸಂಬಂಧಿತ ಸಂಶೋಧನೆಗಳು ಮತ್ತು ಪ್ರಾಯೋಗಿಕ (Pilot) ಯೋಜನೆಗಳನ್ನು ಜನಪ್ರಿಯಗೊಳಿಸುವುದಕ್ಕಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

(viii) ಸ್ಥಳೀಯ ಮಟ್ಟಕ್ಕೆ ಸೂಕ್ತವಾದ ಸಂಶೋಧನಾ ಮತ್ತು ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಳ್ಳುವುದು.

(ix) ಕೃಷಿ ಮತ್ತು ತೋಟಗಾರಿಕಾ ವಿಸ್ತರಣೆ ಹಾಗೂ ತರಬೇತಿ ಕೇಂದ್ರಗಳನ್ನು ನಿರ್ವಹಿಸುವುದು.

(x) ಸರ್ಕಾರ ವಹಿಸಿರುವ ಭೂ ಸುಧಾರಣೆ ಮತ್ತು ಭೂಸಾರ ಸಂರಕ್ಷಣೆಯ ಕಾರ್ಯಕ್ರಮಗಳನ್ನು ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು

(xi) ಕೃಷಿಕರಿಗೆ ತರಬೇತಿಯನ್ನು ನೀಡುವುದು.

**3. ಸಣ್ಣ ನೀರಾವರಿ**

(i) ಅಂತರ್ಜಲ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸುವುದು.

(ii) 40 ಹೆಕ್ಟೇರ್‌ವರೆಗಿನ ಅಚ್ಚುಕಟ್ಟು ಪ್ರದೇಶಕ್ಕೆ ಸಣ್ಣ ನೀರಾವರಿ ಯೋಜನೆಯನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು.

**4. ಪಶುಸಂಗೋಪನೆ, ಹೈನುಗಾರಿಕೆ, ಕೋಳಿಸಾಕಾಣಿಕೆ ಮತ್ತು ಮೀನುಗಾರಿಕೆ**

(i) ಸಾಂಕ್ರಾಮಿಕ ಮತ್ತು ಸೋಂಕು ರೋಗಗಳನ್ನು ತಡೆಯುವುದು

(ii) ಜಿಲ್ಲೆಗಳಲ್ಲಿ ಜಿಲ್ಲಾಮಟ್ಟದ ಪಶುವೈದ್ಯಕೀಯ ಪ್ರಯೋಗಾಲಯಗಳು, ಚಿಕಿತ್ಸಾಲಯಗಳನ್ನು ಹಾಗೂ ಸಂಚಾರಿ ಚಿಕಿತ್ಸಾಲಯಗಳನ್ನು ಸ್ಥಾಪಿಸುವುದು.

(iii) ತಾಲ್ಲೂಕು ಮತ್ತು ಗ್ರಾಮ ಪಶುವೈದ್ಯಕೀಯ ಆಸ್ಪತ್ರೆ, ಪ್ರಥಮ ಚಿಕಿತ್ಸಾ ಕೇಂದ್ರಗಳು ಮತ್ತು ಸಂಚಾರಿ ಪಶುವೈದ್ಯಕೀಯ ಔಷಧಾಲಯಗಳನ್ನು ಸ್ಥಾಪಿಸುವುದು.

(iv) ಜಿಲ್ಲಾ ಹಾಲು ಉತ್ಪಾದಕರ ಸಹಕಾರ ಸಂಘಗಳಿಗೆ ಉತ್ತೇಜನ ನೀಡುವುದು.

(v) ಕೃಷಿಕರಿಗೆ ಜಿಲ್ಲಾಮಟ್ಟದ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

(vi) ಔಷಧಗಳು, ಔಷಧೋಪಕರಣಗಳು ಮತ್ತು ಚುಚುಮದ್ದುಗಳನ್ನು ಒದಗಿಸುವುದು.

(vii) ಜಿಲ್ಲಾ ಪಂಚಾಯಿತಿಯ ಅಧೀನದಲ್ಲಿ ಬರುವ ನೀರಾವರಿ ಕಾಮಗಾರಿಗಳಲ್ಲಿ ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸುವುದು.

(viii) ಮೀನುಗಾರಿಕೆ ಮತ್ತು ಮೀನುಗಾರರ ಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು.

(ix) ಹೈನುಗಾರಿಕೆ, ಕೋಳಿ ಸಾಕಾಣಿಕೆ ಮತ್ತು ಹಂದಿ ಸಾಕಾಣಿಕೆಗೆ ಉತ್ತೇಜಿಸುವುದು.

**5. ಸಾಮಾಜಿಕ ಅರಣ್ಯ**

(i) ಗ್ರಾಮ ಪಂಚಾಯಿತಿ ಹಾಗೂ ತಾಲ್ಲೂಕು ಪಂಚಾಯಿತಿಗಳ ಉಪಯೋಗಕ್ಕಾಗಿ ಸಾಮಾಜಿಕ ಅರಣ್ಯ ಮತ್ತು ಜೈವಿಕ ವೈವಿಧ್ಯತೆ ನಿರ್ವಹಣೆಗೆ ಸಂಬಂಧಿಸಿದಂತೆ ಮಾರ್ಗಸೂಚಿಗಳನ್ನು ರಚಿಸುವುದು.

(ii) ಸಾಮಾಜಿಕ ಮತ್ತು ಕೃಷಿ ಅರಣ್ಯ, ಇಂಧನ ಸ್ಥಾವರ ಮತ್ತು ಮೇವು ಅಭಿವೃದ್ಧಿಯನ್ನು ಉತ್ತೇಜಿಸುವುದು.

(iii) ಸಮುದಾಯ ಭೂಮಿಯಲ್ಲಿ ಬೆಳೆದ ಸಣ್ಣ ಅರಣ್ಯ ಉತ್ಪನ್ನಗಳನ್ನು ನಿರ್ವಹಿಸುವುದು.

(iv) ಖರಾಬು ಭೂಮಿಯನ್ನು ಅಭಿವೃದ್ಧಿ ಪಡಿಸುವುದು.

**6. ಪ್ರವಾಸೋದ್ಯಮ**

(i) ಜಿಲ್ಲೆಗಳ ವಿವಿಧ ತಾಲ್ಲೂಕುಗಳಲ್ಲಿರುವ ಪ್ರವಾಸಿ ತಾಣಗಳನ್ನು ಗುರುತಿಸುವುದು ಮತ್ತು ಅಭಿವೃದ್ಧಿಪಡಿಸುವುದು.

(ii) ಜಿಲ್ಲಾ ಪ್ರವಾಸೋದ್ಯಮ ನೀತಿಯನ್ನು ಮತ್ತು ಪ್ರವಾಸೋದ್ಯಮ ಚಟುವಟಿಕೆಗಳನ್ನು ರೂಪಿಸುವುದು.

(iii) ಪ್ರವಾಸಿ ಕೇಂದ್ರಗಳಲ್ಲಿ ಮೂಲ ಸೌಲಭ್ಯಗಳನ್ನು ಕಲ್ಪಿಸುವುದು.

(iv) ಅವುಗಳಿಗೆ ವಹಿಸಿಕೊಟ್ಟಿರುವ ಪ್ರವಾಸೋದ್ಯಮ ಆಕರ್ಷಣೆಗಳನ್ನು ಆರಂಭಿಸುವುದು ಮತ್ತು ನಿರ್ವಹಿಸುವುದು.

(v) ತಾಲ್ಲೂಕುಗಳಲ್ಲಿರುವ ಪ್ರವಾಸಿ ತಾಣಗಳಲ್ಲಿ ಪ್ರವಾಸಿ ಮಾರ್ಗದರ್ಶಕರು, ಹಸಿರು ಪೊಲೀಸ್, ಕಾವಲು ವ್ಯವಸ್ಥೆ, ಜೀವ ರಕ್ಷಕರುಗಳನ್ನು ನಿಯೋಜಿಸುವುದು ಮತ್ತು ಅವುಗಳಿಗೆ ವಹಿಸಿಕೊಟ್ಟಿರುವ ಪ್ರವಾಸಿ ಕೇಂದ್ರಗಳಲ್ಲಿ ಪ್ರವೇಶ ಶುಲ್ಕಗಳು, ವಾಹನ ನಿಲುಗಡೆ ಶುಲ್ಕಗಳನ್ನು ಸಂಗ್ರಹಿಸುವುದು.

**7. ಸಣ್ಣ ಪ್ರಮಾಣದ ಕೈಗಾರಿಕೆಗಳು ಮತ್ತು ಗ್ರಾಮೀಣ ಕೈಗಾರಿಕೆಗಳು – ಖಾದಿ, ಕರಕುಶಲ ಕಲೆಗಳು, ಗ್ರಾಮೋದ್ಯೋಗಗಳು, ಆಹಾರ ಸಂಸ್ಕರಣಾ ಕೈಗಾರಿಕೆಗಳು ಮತ್ತು ಇತರ ಕೃಷಿಯೇತರ ಚಟುವಟಿಕೆಗಳು**

(i) ಗುಡಿ ಕೈಗಾರಿಕೆಗಳ ಅಭಿವೃದ್ಧಿಗೆ ಸಂಬಂಧಪಟ್ಟ ವ್ಯವಸ್ಥೆಯನ್ನು (mechanism) ಸ್ಥಾಪಿಸುವುದು.

(ii) ಗ್ರಾಮ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿ ಮಟ್ಟದಲ್ಲಿ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು, ತಾಂತ್ರಿಕ ಜ್ಞಾನ ಮತ್ತು ಸಂಬಂಧಿತ ಇತರ ಉಪಯುಕ್ತ ಕೌಶಲ್ಯಗಳು ಹಾಗೂ ತಿಳುವಳಿಕೆಯನ್ನು ಒದಗಿಸುವುದು.

(iii) ತರಬೇತಿ ಮತ್ತು ಉತ್ಪಾದನಾ ಕೇಂದ್ರಗಳನ್ನು ಸ್ಥಾಪಿಸುವುದು ಹಾಗೂ ನಿರ್ವಹಿಸುವುದು.

(iv) ಗುಡಿ ಕೈಗಾರಿಕೆಗಳು, ಖಾದಿ, ಗ್ರಾಮೋದ್ಯೋಗಗಳು ಮತ್ತು ಕರಕುಶಲಕಲೆಗಳಿಗೆ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸುವುದು.

(v) ಗ್ರಾಮೋದ್ಯೋಗಗಳು ಮತ್ತು ಗುಡಿ ಕೈಗಾರಿಕೆಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ರಾಜ್ಯ ಸಮಿತಿಗಳು ಮತ್ತು ಅಖಿಲ ಭಾರತ ಸಮಿತಿಗಳು ಹಾಗೂ ಆಯೋಗಗಳ ಸ್ಕೀಮುಗಳನ್ನು ಅನುಷ್ಠಾನಗೊಳಿಸುವುದಕ್ಕಾಗಿ ಸಂಪರ್ಕ ವ್ಯವಸ್ಥೆಗಳನ್ನು ಅಭಿವೃದ್ಧಿಪಡಿಸುವುದು.

(vi) ಜಿಲ್ಲಾ ಮಟ್ಟದ ಉದ್ಯಮಶೀಲತಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

(vii) ಖಾದಿ ಮತ್ತು ಗ್ರಾಮೋದ್ಯೋಗಗಳು ಹಾಗೂ ಆಹಾರ ಸಂಸ್ಕರಣಾ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ಪತ್ತಿನ ಯೋಜನೆಗಳನ್ನು ರೂಪಿಸುವುದು ಹಾಗೂ ಅನುಷ್ಠಾನಗೊಳಿಸುವುದು.

(viii) ಗ್ರಾಮೋದ್ಯೋಗ ಮತ್ತು ಗುಡಿ ಕೈಗಾರಿಕೆಗಳ ಅಭಿವೃದ್ಧಿಗೆ ಸಂಬಂಧಿಸಿದ ರಾಜ್ಯ ಸಮಿತಿಗಳು ಮತ್ತು ಅಖಿಲ ಭಾರತ ಸಮಿತಿಗಳು ಹಾಗೂ ಆಯೋಗಗಳ ಸ್ಕೀಮುಗಳನ್ನು ಅನುಷ್ಠಾನಗೊಳಿಸುವುದು.

**8. ಗ್ರಾಮೀಣ ವಸತಿ**

ಜಿಲ್ಲಾ ಮಟ್ಟದ ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ಉತ್ತೇಜನ ನೀಡುವುದು.

**9. ಕುಡಿಯುವ ನೀರು ಪೂರೈಕೆ**

(i) ಕುಡಿಯುವ ನೀರು ಪೂರೈಕೆ ಯೋಜನೆಗಳು ಅಥವಾ ಬಹು ತಾಲ್ಲೂಕು ಕುಡಿಯುವ ನೀರು ಪೂರೈಕೆ ಯೋಜನೆಗಳನ್ನು ಸ್ಥಾಪಿಸುವುದು.

(ii) ಕುಡಿಯುವ ನೀರು ಪರೀಕ್ಷಣಾ ಪ್ರಯೋಗಾಲಯಗಳನ್ನು ಸ್ಥಾಪಿಸುವುದು.

(iii) ನೀರು ಪೂರೈಕೆ ಯೋಜನೆಗಳನ್ನು ಅನುಷ್ಠಾನಗೊಳಿಸುವುದಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಗಳು ಮತ್ತು ತಾಲ್ಲೂಕು ಪಂಚಾಯಿತಿಗಳಿಗೆ ಹಣಕಾಸು ನೆರವು ನೀಡುವುದು.

**10. ಲೋಕೋಪಯೋಗಿ, ಪಟ್ಟಣ ಮತ್ತು ಗ್ರಾಮಾಂತರ ಯೋಜನೆ (ರಸ್ತೆಗಳು, ಸೇತುವೆಗಳು ಹಾಯ್ಗಡಗಳು, ಜಲಮಾರ್ಗಗಳು ಮತ್ತು ಇತರ ಸಂಪರ್ಕ ಮಾರ್ಗಗಳು)**

(i) ಯಾವುದೇ ಇತರ ಸ್ಥಳೀಯ ಪ್ರಾಧಿಕಾರ ಅಥವಾ ಸರ್ಕಾರದ ನಿಯಂತ್ರಣದ ಅಡಿಯಲ್ಲಿ ಬರದಿರುವಂಥ ರಾಷ್ಟ್ರೀಯ ಹೆದ್ದಾರಿಗಳು ಮತ್ತು ರಾಜ್ಯ ಹೆದ್ದಾರಿಗಳು ಹಾಗೂ ಬಹುಜಿಲ್ಲಾ ರಸ್ತೆಗಳು (ಎಂಆರ್‌ಡಿಗಳು), ಸೇತುವೆಗಳು, ಸುರಂಗ ಕಾಲುವೆಗಳನ್ನು, ಹೊರತುಪಡಿಸಿ, ಒಂದಕ್ಕಿಂತ ಹೆಚ್ಚು ತಾಲ್ಲೂಕುಗಳ ಮೂಲಕ ಹಾದುಹೋಗುವ ಅಂಥ ತಾಲ್ಲೂಕುಗಳಿಗೆ ಸಂಬಂಧಪಟ್ಟಿರುವ ಎಲ್ಲಾ ಜಿಲ್ಲಾ ರಸ್ತೆಗಳ ಸಂಬಂಧದಲ್ಲಿ ಯೋಜನೆ ರೂಪಿಸುವುದು, ನಿರ್ಮಾಣ ಮಾಡುವುದು ಮತ್ತು ನಿರ್ವಹಿಸುವುದು.

(ii) ಕಟ್ಟಡಗಳ ನಿರ್ಮಾಣ ಮತ್ತು ನಿರ್ವಹಣೆಗಳಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಗಳು ಹಾಗೂ ತಾಲ್ಲೂಕು ಪಂಚಾಯಿತಿಗಳಿಗೆ ತಂತ್ರಜ್ಞಾನವನ್ನು ಒದಗಿಸುವುದು.

(iii) ಗ್ರಾಮಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್ ಕೋರಿಕೆಯ ಮೇರೆಗೆ ತಾಂತ್ರಿಕ, ವಿನ್ಯಾಸಗಳನ್ನು ಹೊಸ ತಂತ್ರಜ್ಞಾನಗಳನ್ನು ಒದಗಿಸುವುದು.

(iv) ಮಾರುಕಟ್ಟೆಗಳು, ಆಟದ ಮೈದಾನ, ಕ್ರೀಡಾಂಗಣ ಮೊದಲಾದಂಥ ಬಹು ತಾಲ್ಲೂಕು ಮಟ್ಟದ ನಾಗರಿಕ ಮೂಲಸೌಲಭ್ಯಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು.

**11. ಗ್ರಾಮೀಣ ವಿದ್ಯುದೀಕರಣ/ ವಿದ್ಯುಚ್ಛಕ್ತಿ ಮತ್ತು ಇಂಧನ**

(i) ಸೂಕ್ತವಾದ ಸಾಂಪ್ರದಾಯಿಕ ಮತ್ತು ಸಾಂಪ್ರದಾಯಿಕವಲ್ಲದ ಇಂಧನ ಘಟಕಗಳನ್ನು ಕುರಿತು ಯೋಜನೆ ರೂಪಿಸುವುದು, ಸ್ಥಾಪಿಸುವುದು ಹಾಗೂ ನಿರ್ವಹಿಸುವುದು.

(ii) ಸಾಂಪ್ರದಾಯಿಕ ಮತ್ತು ಸಾಂಪ್ರದಾಯಿಕವಲ್ಲದ ಇಂಧನಗಳನ್ನು ಇತರರಿಗೆ ಮಾರಾಟ ಮಾಡುವುದು.

**12. ಬಡತನ ನಿರ್ಮೂಲನೆ**

(i) ಗ್ರಾಮ ಪಂಚಾಯತಿಗಳು ಗುರುತಿಸಿದ ಬಡವರ ಕೌಶಲ್ಯವರ್ಧನೆ.

(ii) ತಾಂತ್ರಿಕ ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸುವುದು.

(iii) ಗ್ರಾಮ ಪಂಚಾಯತಿಗಳ ಪಾಲುದಾರಿಕೆಯಲ್ಲಿ ಉದ್ಯೋಗ ಖಾತರಿ ಯೋಜನೆಗಳನ್ನು ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು.

(iv) ಉದ್ಯೋಗ ಮೇಳಗಳನ್ನು ಏರ್ಪಡಿಸುವುದು

**13. ಸಾರ್ವಜನಿಕ ವಿತರಣಾ ವ್ಯವಸ್ಥೆ (ಪಿಡಿಎಸ್)**

**14. ವಿಪತ್ತು ನಿರ್ವಹಣೆ**

ವಿಪತ್ತು ನಿರ್ವಹಣೆಗೆ ಅಗತ್ಯವಿರುವ ಮೂಲಸೌಕರ್ಯ ಸೃಷ್ಟಿಸುವುದು.

**15. ಶಿಕ್ಷಣ (ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಣ, ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣ, ವಯಸ್ಕರ ಹಾಗೂ ಅನೌಪಚಾರಿಕ ಶಿಕ್ಷಣ)**

(i) ಜಿಲ್ಲಾಮಟ್ಟದಲ್ಲಿ ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಕುರಿತು ಯೋಜನೆಯನ್ನು ರೂಪಿಸುವುದು ಹಾಗೂ ನಿರ್ವಹಿಸುವುದು.

(ii) ಪ್ರೌಢಶಾಲೆಗಳು, ಪದವಿಪೂರ್ವ ಕಾಲೇಜುಗಳು, ಐಟಿಐ, ಪಾಲಿಟೆಕ್ನಿಕ್ ಕಾಲೇಜುಗಳನ್ನು ಸ್ಥಾಪಿಸುವುದಕ್ಕೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರಗಳಿಗೆ ಪ್ರಸ್ತಾವನೆಗಳನ್ನು ಕಳುಹಿಸುವುದು ಮತ್ತು ಮಂಜೂರಾತಿಗಳನ್ನು ಪಡೆದುಕೊಳ್ಳುವುದು.

(iii) ಸರ್ಕಾರಿ ಪದವಿಪೂರ್ವ ಕಾಲೇಜುಗಳು, ಐಟಿಐ, ಪಾಲಿಟೆಕ್ನಿಕ್ ಕಾಲೇಜುಗಳನ್ನು ನಿರ್ಮಿಸುವುದು ಹಾಗೂ ನಿರ್ವಹಿಸುವುದು.

(iv) ಜಿಲ್ಲಾ ಪಂಚಾಯಿತಿ ಅಧೀನದಲ್ಲಿನ ಸಂಸ್ಥೆಗಳಿಗೆ ಸಂಬಂಧಿಸಿದ ವಿದ್ಯಾರ್ಥಿ ನಿಲಯಗಳ ಸಂಬಂಧದಲ್ಲಿ ಯೋಜನೆಯನ್ನು ರೂಪಿಸುವುದು ಮತ್ತು ನಿರ್ವಹಿಸುವುದು.

(v) ಶಿಕ್ಷಣಕ್ಕೆ ಸಂಬಂಧಿಸಿದ ಕೇಂದ್ರ ಮತ್ತು ರಾಜ್ಯ ಪ್ರಾಯೋಜಿತ ಕಾರ್ಯಕ್ರಮಗಳನ್ನು ಸಮನ್ವಯಗೊಳಿಸುವುದು ಮತ್ತು ಶಿಕ್ಷಣ ಚಟುವಟಿಕೆಗಳನ್ನು ಸರ್ವೆ ಮಾಡುವುದು ಮತ್ತು ಮೌಲ್ಯಮಾಪನ ಮಾಡುವುದು.

(vi) ಗ್ರಾಮೀಣ ಕುಶಲ ಕಲೆ ಮತ್ತು ವೃತ್ತಿಶಿಕ್ಷಣ ತರಬೇತಿಗಳನ್ನು ಏರ್ಪಡಿಸುವುದು ಹಾಗೂ ನಿರ್ವಹಿಸುವುದು.

(vii) ಗ್ರಾಮಪಂಚಾಯಿತಿಗಳು ಮತ್ತು ತಾಲ್ಲೂಕು ಪಂಚಾಯಿತಿಗಳಿಗೆ ತಾಂತ್ರಿಕ ಹೂಡುವಳಿ ರೂಪಗಳು, ಸಾಮಗ್ರಿಗಳು, ಹಣಕಾಸು ನೆರವನ್ನು ಒದಗಿಸುವುದು.

(viii) ಪದವಿಪೂರ್ವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯಗಳು, ಹಿಂದುಳಿದ ವರ್ಗಗಳ ಮತ್ತು ಸಮೂಹಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ, ಬಾಲಕಿಯರಿಗೆ, ವಿಶೇಷ ಚೇತನರಿಗೆ ಮತ್ತು ಅಲ್ಪಸಂಖ್ಯಾತ ಸಮೂಹಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ವೃತ್ತಿಪರ ಹಾಗೂ ತಾಂತ್ರಿಕ ಶಿಕ್ಷಣ ನೀಡುವುದು ಮತ್ತು ವಯಸ್ಕರ ಶಿಕ್ಷಣದ ಕುರಿತು ಯೋಜನೆ ರೂಪಿಸುವುದು ಹಾಗೂ ನಿರ್ವಹಿಸುವುದು.

(ix) ಜಿಲ್ಲಾ ಪಂಚಾಯಿತಿಯ ಅಧೀನದಲ್ಲಿ ಬರುವ ಶಿಕ್ಷಣ ಸಂಸ್ಥೆಗಳಿಗೆ ಸರ್ಕಾರದ ನಿರ್ದೇಶನಗಳಿಗನುಸಾರವಾಗಿ ಅತಿಥಿ ಶಿಕ್ಷಕರನ್ನು ನಿಯೋಜಿಸುವುದು.

(x) ವಿಶೇಷ ಚೇತನ ಮಕ್ಕಳಿಗೆ ವಿಶೇಷ ಶಾಲೆಗಳು ಮತ್ತು ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದು ಹಾಗೂ ನಿರ್ವಹಿಸುವುದು.

(xi) ಅನೌಪಚಾರಿಕ (non-formal) ಶಿಕ್ಷಣದ ಕಾರ್ಯಕ್ರಮಗಳಿಗೆ ಉತ್ತೇಜಿಸುವುದು.

**16. ಗ್ರಂಥಾಲಯಗಳು**

ಇತರ ಸ್ಥಳೀಯ ಪ್ರಾಧಿಕಾರಗಳು ಅಥವಾ ಸರ್ಕಾರದ ನಿಯಂತ್ರಣದ ಅಡಿಯಲ್ಲಿ ಬರದಿರುವಂಥ ಜಿಲ್ಲಾಪಂಚಾಯಿತಿ ಮಟ್ಟದ ಗ್ರಂಥಾಲಯಗಳು ಮತ್ತು ವಾಚನಾಲಯಗಳನ್ನು ಸ್ಥಾಪಿಸುವುದಕ್ಕೆ ಸಂಬಂಧಿಸಿದಂತೆ ಯೋಜನೆಗಳನ್ನು ರೂಪಿಸುವುದು, ಅನುಷ್ಠಾನಗೊಳಿಸುವುದು, ಸ್ಥಾಪಿಸುವುದು, ನಿರ್ವಹಿಸುವುದು ಹಾಗೂ ಮೇಲ್ವಿಚಾರಣೆಯನ್ನು ಮಾಡುವುದು.

**17. ಕ್ರೀಡೆಗಳು ಮತ್ತು ಸಾಂಸ್ಕೃತಿಕ ಚಟುವಟಿಕೆಗಳು**

(i) ಗ್ರಾಮೀಣ ಕಲಾ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಹಾಗೂ ಕುಶಲಕಲೆಗಳ ಉತ್ಪನ್ನಗಳನ್ನು ದಾಖಲೀಕರಿಸುವುದು.

(ii) ಬಹುಪಾಲು ಅವನತಿಯಾಗಿರುವ ಸಾಂಸ್ಕೃತಿಕ ಪರಂಪರೆಯನ್ನು ಸಂರಕ್ಷಿಸುವುದು ಮತ್ತು ಪುನಶ್ಚೇತನಗೊಳಿಸುವುದು.

(iii) ಜಿಲ್ಲಾ ಮಟ್ಟದಲ್ಲಿ ಸಾಂಸ್ಕೃತಿಕ ಕೇಂದ್ರಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸುವುದು ಹಾಗೂ ಕುಶಲಕಲಾ ಮೇಳಗಳನ್ನು ಏರ್ಪಡಿಸುವುದು.

(iv) ಜಿಲ್ಲಾಮಟ್ಟದಲ್ಲಿ ಯುವಮೇಳಗಳನ್ನು ಏರ್ಪಡಿಸುವುದು.

(v) ಜಿಲ್ಲಾಮಟ್ಟದಲ್ಲಿ ಕ್ರೀಡಾಶಾಲೆಗಳ ಮೇಲ್ವಿಚಾರಣೆಯನ್ನು ಮಾಡುವುದು.

(vi) ಮತೀಯ ಮತ್ತು ಧಾರ್ಮಿಕ ಸಾಮರಸ್ಯ ಸಾಧನೆ, ಮಕ್ಕಳು, ಅಲ್ಪಸಂಖ್ಯಾತರು, ಮಹಿಳೆಯರ ಹಕ್ಕುಗಳ ಉಲ್ಲಂಘನೆ, ದೌರ್ಜನ್ಯ, ತಾರತಮ್ಯಗಳ ವಿರುದ್ಧ ಸುರಕ್ಷತೆ ಒದಗಿಸುವ ವಿಷಯದಲ್ಲಿ ಅತ್ಯುತ್ತಮ ಕಾರ್ಯಸಾಧನೆ ಮಾಡಿರುವ ಗ್ರಾಮ ಪಂಚಾಯಿತಿಗಳಿಗೆ ವಾರ್ಷಿಕ ಪ್ರಶಸ್ತಿ ನೀಡುವ ಪದ್ಧತಿಯನ್ನು ಪ್ರಾರಂಭಿಸುವುದು

**18. ಮಾರುಕಟ್ಟೆ, ಪರಿಷೆ ಮತ್ತು ದನಗಳ ಜಾತ್ರೆಗಳು**

ದನಗಳ ಜಾತ್ರೆಗಳನ್ನು ಒಳಗೊಂಡಂತೆ ಜಿಲ್ಲಾ ಮಟ್ಟದಲ್ಲಿ ಪರಿಷೆ, ಉತ್ಸವಗಳನ್ನು ನಡೆಸುವುದಕ್ಕೆ ನೀತಿನಿಯಮಗಳನ್ನು ರೂಪಿಸುವುದು ಮತ್ತು ಅವುಗಳನ್ನು ನಡೆಸುವುದು.

